# ಸಿದ್ಧಗಂಗಾ

ಸಂಪುಟ-೨೧ ಸಂಚಿಕೆ-೮ ಆಗಸ್ಟ್, ೧೯೮೫

## ಶ್ರೀ ಸಿದ್ಧಗಂಗಾ ಸುಪ್ರಭಾತ

ಬಹುಮುಖದ ವ್ಯಕ್ತಿತ್ವ ಬಹುಕಾರ್ಯ ಕರ್ತೃತ್ವ
ಬಹುಮುಖದ ಪಾಂಡಿತ್ಯ, ಪ್ರವಚನ ಪಟುತ್ವ-
ಬಹುವಿರಳವಿಂತಹ ಸಮಗ್ರತ್ವ ಸೃಷ್ಟಿಯಲಿ
ಇಹ ಪರದ ಏಕತ್ವವಿಲ್ಲಿ ನಿಜ ತತ್ತ್ವ ॥

* * *

ಇನ್ನೆಲ್ಲಿ ಕಾಣುವುದು ಇಂಥವನ ಬಾಳಿಗೇ
ಕಣ್ಣಾದ ಶಿವಯೋಗ ಸಾಮ್ರಾಟನ ?
ಧನ್ಯವೀ ಶತಮಾನ, ಧನ್ಯ ಭಾರತ ಭೂಮಿ
ಧನ್ಯ ಕರ್ನಾಟಕದ ಸಕಲ ಜನ ॥

* * *

ಮಂಗಲವು ಸರ್ವಮತ ಜಾತಿಗಳ ಸಂಗಮಕೆ
ಮಂಗಲವು ಸಿದ್ಧಗಂಗಾ ಕ್ಷೇತ್ರಕೆ ।
ಮಂಗಲವು ಶಿವಕುವರ ಶಿವಯೋಗಿ ಪುಂಗವಗೆ
ಮಂಗಲವು ಜೀವಕುಲ ಸರ್ವತ್ರಕೆ ॥

* * *

ಜಂಗಮ ಚೈತನ್ಯವು ರಿಂಗಣ ಗುಣಿವ ವಿ-
ಹಂಗಮ ಸ್ವರನಾಗಿ ಬೆಳಗಾಯಿತು !
ಮಂಗಲದ ಮನೆ ಸಿದ್ಧಗಂಗಾ ಶ್ರೀ ಜನ-
ಜಂಗುಳಿಯ ಪೊರೆ ಏಳು ಬೆಳಗಾಯಿತು ॥

—ಡಾ॥ ಸಿದ್ಧಯ್ಯ ಪುರಾಣಿಕ

# ಸಿದ್ಧಗಂಗಾಂತರಂಗ



# ಶ್ರೀವಾಣಿ

ಭಾರತ ಖಂಡಕ್ಕೆ ಸ್ವಾತಂತ್ರ್ಯ ಲಭಿಸಿ, 38 ವರ್ಷಗಳು ಸಂದಿವೆ. ಈ ಸಂಪಾದಿಸಿದ ಸ್ವಾತಂತ್ರ್ಯದ ಪ್ರಯೋಜನವೇನು? ಎಂಬ ಪ್ರಶ್ನೆ ಅರ್ಥವಾಗಬೇಕಾದರೆ, ಸ್ವಾತಂತ್ರ್ಯ ಪೂರ್ವ ಇದ್ದ ಜೀವನ ವ್ಯವಸ್ಥೆಯನ್ನು, ಅರ್ಥಮಾಡಿಕೊಂಡಾಗ ಮಾತ್ರ ಸಾಧ್ಯ. ಒಬ್ಬ ಆಂಗ್ಲ ವಿಚಾರವಾದಿ ಸ್ವಾತಂತ್ರ್ಯದ ಮೌಲ್ಯವನ್ನು ಕುರಿತು ಹೀಗೆ ವಿಚಾರಮಾಡಿದ್ದಾನೆ. "ಯಾವ ರಾಷ್ಟ್ರದಲ್ಲಿ ಸಂಪತ್ತು ಇದ್ದು, ಅನುಕೂಲವು ಇದ್ದು, ಸ್ವಾತಂತ್ರ್ಯವಿರುವುದಿಲ್ಲವೋ, ಅದು ಬಡ ರಾಷ್ಟ್ರವೆನಿಸುತ್ತದೆ. ಆದರೆ ಯಾವ ರಾಷ್ಟ್ರ ಸಂಪತ್ತಿಲ್ಲದೆ, ಬಡತನದಿಂದ ಕೂಡಿದ್ದರೂ, ಸ್ವಾತಂತ್ರ್ಯ ಪಡೆದುಕೊಂಡಿರುತ್ತದೆಯೋ ಅದು ಸಂಪದ್ಭರಿತ ರಾಷ್ಟ್ರವೆನಿಸುತ್ತದೆ.

ಪ್ರತಿಯೊಂದು ಪಶು ಪಕ್ಷಿಗಳೂ ಕೂಡ, ಸ್ವಾತಂತ್ರ್ಯವನ್ನು ಅಪೇಕ್ಷಿಸುತ್ತವೆ. ಎನ್ನುವುದಕ್ಕೆ ಒಂದು ನಡೆದ ಪ್ರಸಂಗ, ಒಮ್ಮೆ ಮೈಸೂರಿನ ದೊಡ್ಡ ಮಹಾರಾಜರು, ಕಾಕನಕೋಟೆಯಲ್ಲಿ ಆನೆಗಳನ್ನು ಬಂಧಿಸಿದರು. ಅವುಗಳಲ್ಲಿ ಒಂದು ಸಲಗ, ತನಗೆ ಸ್ವಾತಂತ್ರ್ಯ ಹೋಯಿತೆಂಬ ಭಾವನೆಯಿಂದ ಆಹಾರಾದಿಗಳನ್ನು ತೆಗೆದುಕೊಳ್ಳದೆ ಉಪವಾಸ ಮಾಡಿತು. ದಿನೇ ದಿನೇ ಕೃಶವಾಯಿತು ಮಹಾರಾಜರು ಬಂದು ನೋಡಿ, ಅದಕ್ಕೆ ಪ್ರಿಯವಾದ ಆಹಾರವನ್ನು ಕೊಡಲು ಅಪ್ಪಣೆ ಮಾಡಿದರು. ಆದರೂ ಅದು ಆಹಾರವನ್ನು ತೆಗೆದುಕೊಳ್ಳದೆ ಉಪವಾಸವನ್ನು ಮುಂದುವರಿಸಿತು. ಹೀಗೆ ಹತ್ತು ದಿನಗಳು ಕಳೆದು ಹನ್ನೊಂದನೆಯ ದಿನ ತಾನು ಪ್ರಾಣಬಿಟ್ಟಿತು. ಅದನ್ನು ಕಂಡ ಮಹಾರಾಜರಿಗೆ ಕಣ್ಣಲ್ಲಿ ನೀರೂರಿತು. ಆಗ ಅವರು ಒಂದು ಮಾತು ಹೇಳಿದರು. "ಎಲೈ ಗಜರಾಜ! ಮನುಷ್ಯನಿಗಿಂತಲೂ ಕೂಡ, ಸ್ವಾತಂತ್ರ್ಯದ ಬೆಲೆಯನ್ನು ನೀನು ಚೆನ್ನಾಗಿ ಅರ್ಥಮಾಡಿಕೊಂಡಿದ್ದಿಯೆ ಬುದ್ಧಿಶಕ್ತಿಯಲ್ಲಿಯೂ ಪ್ರಾಣಿಗಳಿಗಿಂತಲೂ ಮೇಲಾದ ಮನುಷ್ಯ, ಈ ಸ್ವಾತಂತ್ರ್ಯದ ಬೆಲೆಯನ್ನು ಅರ್ಥ ಮಾಡಿಕೊಂಡಿಲ್ಲವಲ್ಲಾ! ಎಂದು.

ಈ ಪ್ರಸಂಗ ಏನೇ ಇರಲಿ, ಸ್ವಾತಂತ್ರ್ಯ ಅರ್ಥವಾಗಬೇಕಾದರೆ, ದೇಶದ ಪ್ರತಿಯೊಬ್ಬ ವ್ಯಕ್ತಿಯೂ, ದೇಶಪ್ರೇಮವನ್ನು ಬೆಳೆಸಿಕೊಳ್ಳಬೇಕು. ಈ ಘನ ವ್ಯಕ್ತಿತ್ವವನ್ನು ರೂಪಿಸಿಕೊಂಡಾಗ ಮಾತ್ರ ಸಾಧ್ಯ. ಅದೇ ಅವನ ದೇಶಕ್ಕೆ ಶ್ರೇಷ್ಠ ಕೊಡುಗೆಯೂ ಆಗುತ್ತದೆ.

# "ಸಿದ್ಧಗಂಗಾ" ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಮಠ-572104
ತುಮಕೂರು ಜಿಲ್ಲೆ.

ಪ್ರಧಾನ ಸಂಪಾದಕರು
ಪಂ|| ಚನ್ನಪ್ಪ ಎರೇಸೀಮೆ
ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

* * *

ಸಹ ಸಂಪಾದಕರು
ಟಿ. ಎನ್. ಚಂದ್ರಶೇಖರಯ್ಯ
ಬಸವರಾಜು

* * *

ಜಾಹೀರಾತು ವಿಭಾಗ
ಎಂ. ರೇಣುಕಾರಾಧ್ಯ

* * *

ಪ್ರಸಾರ ವಿಭಾಗ
ಆರ್. ಎಸ್. ಮಲ್ಲೇಶಪ್ಪ

* * *

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

* * *

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ
ಮುದ್ರಣಾಲಯ

* * *

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

## ಚಂದಾ ವಿವರ

ವಾರ್ಷಿಕ ಚಂದಾ 20-00 ರೂ.
ಆಜೀವ ಸದಸ್ಯತ್ವ 201-00 ರೂ


## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಪುಲ್ ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರಹಗಾರರಿಗೆ ಆದ್ಯತೆ ಕೊಡಲಾಗುವುದು.


"ಸಂಪಾದಕರು"
'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ
ಶ್ರೀ ಸಿದ್ಧಗಂಗಾ ಕ್ಷೇತ್ರ-572104
ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

# ಸಂಪಾದಕೀಯ

## ಸೆರಗಿನ ಕೆಂಡ

ವಿಶ್ವವಿದ್ಯಾನಿಲಯದ ಆವರಣದಲ್ಲಿ ಪ್ರಾಧ್ಯಾಪಕರ ಮೇಲೆ ಹಲ್ಲೆ. ರ್ಲಜ್ಜ ನಡವಳಿಕೆ, ಹೇಯ ಕೃತ್ಯ. ತಲೆತಗ್ಗಿಸಬೇಕಾದ ಘಟನೆ. ಸರಸ್ವತಿಯ ುಂದಿರಗಳಲ್ಲಿ ಗೂಂಡಾವರ್ತನೆ. ಅದೂ ಯಾವ ಕಾರಣಕ್ಕಾಗಿ? ತಮಗೆ ಅರ್ಹ ರ್ಜೆ ನೀಡಲಿಲ್ಲವೆಂಬುದಕ್ಕೆ. ಅರ್ಹತೆ ಬರುವುದಾದರೂ ಎಂತು? ಯೋಚನೆ ಾಡುವವರು ಯಾರು? ವ್ಯಾಸಂಗವೇ ಬೇಡ. ಪಾಸುಬೇಕು ಸಾಧನೆ ಬೇಡ ದ್ಧಿ ಬೇಕು. ಎಂಥ ವಿಚಿತ್ರ? ವಿಚಿತ್ರವಲ್ಲ ವಾಸ್ತವಿಕ ಸತ್ಯ. ಇದಕ್ಕೆಲ್ಲ ಕಾರಣ ನು? ಯಾರು? ಈ ವಾತಾವರಣ ಸೃಷ್ಟಿಯಾದದ್ದು ಹೇಗೆ? ಯಾರ‍್ಯಾರ ಾಡುಗೆ ಎಷ್ಟು? ಕೂಲಂಕುಷ ವಿಮರ್ಶೆ ಮಾಡುವ ಹೊಣೆ ಬೇಡವೆ? ಅಧ್ಯಾ ಕ ಅಥವಾ ಪ್ರಾಧ್ಯಾಪಕ ಪರಿಸ್ಥಿತಿಯ ಯಜ್ಞ ಪಶುವಾಗಬೇಕೆ? ವಿದ್ಯಾರ್ಥಿ ಧ್ಯಾಪಕ ಬಾಂಧವ್ಯ ಬಗ್ಗಡವಾಗಿ ಹೋಯಿತಲ್ಲ. ಹೃದಯವಂತಿಕೆ ಬತ್ತಿತೆ? ಾನವೀಯತೆ ಸತ್ತು ಹೋಯಿತೇ? ಪಡೆದ ಪದವಿಗೆ ತಕ್ಕ ಜೀವನ ಕ್ರಮ ಆಚ ಣೆಯಲ್ಲಿ ತಲೆಕೆಳಗು. ಹೀಗಾದರೆ ವಿಶ್ವ ವಿದ್ಯಾನಿಲಯಗಳ ಅಗತ್ಯವಾದರೂ ದೆಯೇ? ಮುಚ್ಚಬಾರದೇಕೆ? ಸ್ವಾತಂತ್ರ್ಯ ಬಂದಮೇಲೆ ಬಿತ್ತಿ ಬೆಳೆದ ಫಲ ದೇನೇ? ಪೂರ್ವಿಕರು ಅನಕ್ಷರಸ್ಥರಾಗಿದ್ದರು. ಪದವಿ ಗಿದವಿ ಅವರಿಗಿರಲಿಲ್ಲ. ಾದರೆ ಅವರು ಸುಸಂಸ್ಕೃತರಾಗಿದ್ದರು. ಇಂದು ನಾವು ಏನಾಗುತ್ತಿದ್ದೇವೆ? ಏನಾ ದ್ದೇವೆ? ಸಾಕ್ಷರರಾಗುತ್ತ ಆಗುತ್ತ ರಾಕ್ಷಸರಾಗುತ್ತಿಲ್ಲವೆ? ಅಸಂಸ್ಕೃತರಾಗು ತ್ತಿಲ್ಲವೇ? ಇದೆಲ್ಲ ಯಾವುದರ ಪರಿಣಾಮ? ಎಲ್ಲಿಗೆ ಮುಟ್ಟೀತು? ದೂರಾ ಲೋಚನೆ, ದೂರದೃಷ್ಟಿ ಬೇಡವೆ? ವಿದ್ಯೆಯನ್ನು ಕಲಿಯಲು ಬಂದ ಅಭ್ಯರ್ಥಿ ಅದೊಂದನ್ನು ಬಿಟ್ಟು ಇನ್ನೆಲ್ಲ ಮಾಡುವುದರ ಸ್ಪಷ್ಟ ಉದಾಹರಣೆ ಇದಲ್ಲವೆ? ಶಿಕ್ಷಣ ಕ್ರಮದಲ್ಲಿ ಬದಲಾವಣೆ ತರುವ ಮಾತು. ಸ್ವಸ್ಥ ಜೀವನಕ್ಕೆ ಹಾದಿಯಾ ಗುವಂಥ ವ್ಯವಸ್ಥೆ ಅದಾದೀತೆ? ಆಗಲಿ ಎಂದು ಹಾರೈಕೆ. ಮನುಷ್ಯ ಮನುಷ್ಯ ನನ್ನು ಪ್ರೀತಿಸುವಂಥ ಬದಲಾವಣೆ ಆದಾಗಲಿ ಎಂದು ನಮ್ಮ ಮನವಿ. ಕೋಟಿ

ಕೋಟಿ ಹಣ ಖರ್ಚು ಮಾಡಿ ಬೋಧಿಸಿದ ಅಧ್ಯಾಪಕನನ್ನು, ಪೋಷಿಸಿದ ಹಿರಿಯರನ್ನು, ಅನ್ನ ವಿಟ್ಟ ಸಂಘ ಸಂಸ್ಥೆಗಳನ್ನು, ಆಶ್ರಯವಿತ್ತ ಮಠ-ಮಾನ್ಯಗಳನ್ನು, ಹೆತ್ತ ತಂದೆ-ತಾಯಿಗಳನ್ನೂ, ಹೊತ್ತ ತಾಯ್ನಾಡನ್ನು ಅಗೌರವಿಸುವಂಥ ಯುವ ಜನಾಂಗವನ್ನು ಸೃಷ್ಟಿಯಾಗದಂತೆ ನೋಡಿಕೊಳ್ಳುವ ಗುರುತರವಾದ ಹೊಣೆ ಇಂದು ನಮ್ಮೆದುರಿಗಿದೆ. ದುರ್ದಿನಗಳನ್ನು, ದುರಂತ ಚಿತ್ರವನ್ನು ಇನ್ನು ದೂರದರ್ಶನಗಳಲ್ಲಿ ನೋಡುವಂತಿಲ್ಲ–ಕಲಾಕೃತಿಗಳಾಗಿ-ವಾಸ್ತವಿಕ ಬದುಕಿನ ನಿತ್ಯವ್ಯಥೆಯಾಗಿ, ಮಾಲೆ ಮಾಲೆಯಾಗಿ ಮುಂದೆ ಬರುವ ದಿನಗಳು ದೂರವಿಲ್ಲ. ಈಗಲಾದರೂ ಎಲ್ಲಾ ವಿಚಾರ ಶೀಲರು ಯೋಚಿಸಿ ಕ್ರಿಯಾಶೀಲರಾಗಬೇಕು. ಇಲ್ಲದೆ ಹೋದರೆ ನಾವು ಪಡೆದ ಸ್ವಾತಂತ್ರ್ಯ ಬಂದ ಭಾಗ್ಯವೇನು ? ದೇಶ ಕಟ್ಟುವುದೆಂದರೆ ಅಣೆ ಕಟ್ಟು ನಿರ್ಮಾಣ, ಸೇತುವೆರಚನೆ, ರಸ್ತೆ ಸಂಪರ್ಕ, ಮರ ಬೆಳೆಸುವುದು, ಸಿನಿಮಾ-ಗಳಿಗೆ ಸಬ್ಸಿಡಿ ಕೊಡುವುದು, ರಾಷ್ಟ್ರ ಮಟ್ಟದಲ್ಲಿ, ಅಂತರಾಷ್ಟ್ರೀಯ ಮಟ್ಟದಲ್ಲಿ ವೈಭವದ ಕ್ರೀಡೋತ್ಸವಗಳನ್ನು ನಡೆಸುವುದು, ವಿವಿಧ ಕ್ಷೇತ್ರಗಳಲ್ಲಿ ಕೆಲವಾರು ಪ್ರಶಸ್ತಿ ನೀಡುವುದು ಅಲ್ಲ.. ಅಲ್ಲವೇ ಅಲ್ಲ. ರಾಷ್ಟ್ರದ ತರುಣ ಜನಾಂಗವನ್ನು ಸುಸಂಸ್ಕೃತ ಜನಾಂಗವಾಗಿ ರೂಪಿಸುವುದು, ಒಂದು ದೇಶ ಯುದ್ಧ ಮಾಡಿ ಕೆಟ್ಟು ಹೋದರೆ ಮತ್ತೆ ಆ ದೇಶವನ್ನು ಕಟ್ಟಬಹುದು. ಆದರೆ ಒಂದು ದೇಶ ವಿದ್ಯೆಯಿಂದ ಹಾಳಾದರೆ ಮತ್ತೆಂದೂ ಆ ದೇಶವನ್ನು ನಿರ್ಮಿಸಲು ಸಾಧ್ಯವಾಗದು. ನಮ್ಮ ತರುಣ ಜನಾಂಗ ಸೆರಗಿನ ಕೆಂಡವಾಗದಿರಲಿ. ಎಲ್ಲ ಜವಾಬ್ದಾರಿಪಂತರೂ ಗಂಭೀರ ವಾಗಿ ಚಿಂತಿಸುವಂತಾಗಲಿ, ನಮ್ಮ ಮಕ್ಕಳೇ ನಮಗೆ ಮುಳ್ಳಾಗುವುದು ಬೇಡ. ಅದಕ್ಕಾಗಿ ನಮ್ಮೆಲ್ಲ ಜೀವನ ದ್ರವ್ಯ ವೆಚ್ಚವಾದರೂ ಚಿಂತೆಯಿಲ್ಲ, ಮಂಗಳಕರವಾದ ವ್ಯವಸ್ಥೆ ಮೂಡಿ ಬರಲಿ. ಸ್ವಾತಂತ್ರ್ಯೋತ್ಸವದಂದು ಹಾಗೆಂದೇ ದೀಕ್ಷೆ ತೊಡೋಣ.

---

## ಅಭಿನಂದನೆ

ಶ್ರೀ ಸಿದ್ಧಗಂಗಾ ಕಲಾ, ವಿಜ್ಞಾನ ಮತ್ತು ವಾಣಿಜ್ಯ ಕಾಲೇಜಿನ ಅಂತಿಮ ಬಿ.ಎಸ್ಸಿ., ವಿದ್ಯಾರ್ಥಿ ಶ್ರೀ ಪರಮೇಶ್ವರಪ್ಪ 1984-85 ನೇ ಏಪ್ರಿಲ್ ನಲ್ಲಿ ನಡೆದ ಬೆಂಗಳೂರು ವಿಶ್ವವಿದ್ಯಾಲಯದ ಪರೀಕ್ಷೆಯಲ್ಲಿ ಪ್ರಪ್ರಥಮ ರ್‍ಯಾಂಕ್ ಗಳಿಸಿ ಕಾಲೇಜಿಗೆ, ಶ್ರೀ ಸಿದ್ಧಗಂಗಾ ವಿದ್ಯಾ ಸಂಸ್ಥೆಗೆ ಕೀರ್ತಿ ತಂದುದಕ್ಕಾಗಿ, “ ಸಿದ್ಧಗಂಗಾ ” ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸಲು ಸಂತೋಷಿಸುತ್ತದೆ. ವಿಜೇತ ವಿದ್ಯಾರ್ಥಿಯ ಯಶಸ್ಸಿನಲ್ಲಿ ಪಾಲುದಾರರಾದ ಕಾಲೇಜಿನ ಪ್ರಾಚಾರ್ಯರಿಗೆ, ಅಧ್ಯಾಪಕ ವೃಂದಕ್ಕೆ, ಮತ್ತಿತರ ಸಿಬ್ಬಂದಿ ವರ್ಗದವರಿಗೆ ಮೆಚ್ಚುಗೆಯನ್ನು ವ್ಯಕ್ತಪಡಿಸುತ್ತದೆ “ ಸಿದ್ಧಗಂಗಾ ”

—ಟಿ ಆರ್. ಮಹಾದೇವಯ್ಯ

## ತನು-ಮನ

ದೇಹವನ್ನು ಧರಿಸಿ ಜೀವನ ನಡೆಸುವ ಮನುಷ್ಯ ಅದರ ಯೋಗಕ್ಷೇಮವನ್ನು ನೋಡಲೇಬೇಕು. ಆದರೆ ಆ ದೇಹದ ಮೇಲಣ ವ್ಯಾಮೋಹ ಅತಿಯಾಗಬಾರದು ಎಂದು ಜ್ಞಾನಿಗಳು ಉದ್ದಕ್ಕೂ ಹೇಳುತ್ತಲೇ ಬಂದಿದ್ದಾರೆ. ದೇಹಕ್ಕೆ ಸ್ವಾಭಾವಿಕವಾದ ಹಸಿವು, ನೀರಡಿಕೆ ಮೊದಲಾದ ಕೆಲವು ಗುಣಗಳು ಇವೆ. ಅವುಗಳನ್ನು ನಾವು ತಣಿಸಬೇಕು. ಇಂದ್ರಿಯಗಳ ಬಯಕೆಗಳನ್ನು ಸಂಪೂರ್ಣವಾಗಿ ಹತ್ತಿಕ್ಕುತ್ತೇನೆ ಎಂಬುದು ಸಾಹಸದ ಮಾತು. ಅದು ಕೆಲವರಿಗೆ ಮಾತ್ರ ಸಾಧ್ಯ. ಜನಸಾಮಾನ್ಯರು ಏನು ಮಾಡಬೇಕು? ಸ್ವಚ್ಛಂದವಾಗದಂತೆ ಅವನ್ನು ಹತೋಟಿಯಲ್ಲಿಟ್ಟುಕೊಳ್ಳಬೇಕು. ಗಾಳಿ ನಮಗೆ ಬೇಕು. ಅದಿಲ್ಲದಿದ್ದರೆ ಬದುಕುವುದು ಹೇಗೆ? ಆದರೆ ಅದು ಸುಳಿಗಾಳಿಯಾಗಿರಬೇಕೇ ಹೊರತು ಬಿರುಗಾಳಿಯಾಗಬಾರದಲ್ಲವೆ? ಹೊಟ್ಟೆಯೊಂದನ್ನೇ ತೆಗೆದುಕೊಳ್ಳಿ: ತಿನ್ನದಿದ್ದರೂ ಕಷ್ಟ, ಹೆಚ್ಚು ತಿಂದರೂ ಕಷ್ಟ. ಅದಕ್ಕೇ ಕವಿಯೊಬ್ಬ "ಮದಿಸುವುದಾದರಿಸೆ, ಕುದಿವುದು ನಿರಾಕರಿಸೆ, ಹದದೊಳಿರಿಸುವುದೆಂತೊ ?" ಎಂದು ಉದ್ಗಾರ ತೆಗೆದಿದ್ದಾನೆ.

ಹತ್ತಿಕ್ಕಿದ ಬಯಕೆಗಳು ಮನದಾಳದಲ್ಲಿ, ಜೀರ್ಣವಾಗದ ಆಹಾರವು ಹೊಟ್ಟೆಯಲ್ಲಿ ಕೊಳೆತು ರೋಗವನ್ನುಂಟುಮಾಡುವಂತೆ, ಗುಪ್ತವಾಗಿದ್ದು ಮಲೆತು ವಿಷಮಿಸಿ ಮಾನಸಿಕ ಆರೋಗ್ಯವನ್ನು ಕೆಡಿಸುತ್ತದೆ. ಆದ್ದರಿಂದ ಅವನ್ನು ಸ್ವಲ್ಪ ಸ್ವಲ್ಪವಾಗಿ ತಣಿಸುತ್ತಾ, ಅವು ಅತಿಯಾಗದಂತೆ ಹತೋಟಿಯಲ್ಲಿಟ್ಟುಕೊಂಡು ಜೋಕೆ-ತೂಕದಿಂದ ಬದುಕಬೇಕಾಗುತ್ತದೆ.

ಜೀವಿ ಒಡಲುಗೊಂಡದ್ದೇ ದೊಡ್ಡ ದೋಷವಲ್ಲ ಒಡಲು ಸಾಧನೆಯ ಸಾಧನ. ಕರ್ಮ ಮಾಡಲು ಶರೀರ ಬೇಕು. ಅದಕ್ಕೆಂದೇ ಜೀವಿ ಈ ಕರ್ಮಭೂಮಿಯಲ್ಲಿ ಹುಟ್ಟಿ ಬಂದಿದ್ದಾನೆ ಎಂದು ಜ್ಞಾನಿಗಳು ಹೇಳುತ್ತಾರೆ. ಆದರೆ ಈ ಒಡಲು ತನ್ನ ಗುಣಗಳಿಂದ ಜೀವಿಗೆ ಸವಾಲನ್ನು ಒಡ್ಡುತ್ತಿರುತ್ತದೆ; ಕರಕರನೆ ಕಾಡಿಸುತ್ತದೆ; ಮಾನಸಿಕ ಪ್ರಗತಿಗೆ ಅಡ್ಡಿಯುಂಟು ಮಾಡುತ್ತದೆ. ಸಾಧಕ ಅವನ್ನೆಲ್ಲಾ ಎದುರಿಸಿ ಗೆದ್ದು ಉದ್ಧಾರವಾಗಬೇಕು. ಇದು ಸುಲಭವಾಗಿ ಆಗುವಂಥದ್ದಲ್ಲ. ತಾಳ್ಮೆ, ದೃಢಚಿತ್ತವುಳ್ಳವ

ಈ ಅಗ್ನಿಪರೀಕ್ಷೆಯಲ್ಲಿ ಗೆಲವ ಸಾಧಿಸುತ್ತಾನೆ. ಈ ವಿಚಾರದಲ್ಲಿ ದೇಹಧಾರಿಯಾದ ಮನುಷ್ಯ ನಿರ್ದೇಹಿಯಾದ ದೇವನಿಗಿಂತ ಮಿಗಿಲೆನಿಸುತ್ತಾನೆ. ಅದಕ್ಕೆ ದೇವರದಾಸಿಮಯ್ಯ ಹೀಗಂದಿದ್ದಾನೆ:

ಒಡಲುಗೊಂಡವ ಹಸಿವ, ಒಡಲುಗೊಂಡವ ಹುಸಿವ
ಒಡಲುಗೊಂಡವನೆಂದು ನೀನೆನ್ನ ಜಡಿದೊಮ್ಮೆ ನುಡಿಯದಿರಾ.
ನೀನೊಮ್ಮೆ ಒಡಲುಗೊಂಡು ನೋಡಾ, ರಾಮನಾಥಾ.

ದೇವರೇ ದೇಹ ಧರಿಸಿ ಬಂದರೂ ಕೂಡ ತನುಗುಣಗಳಿಂದ ಪಾರಾಗಲಾರ ಎಂಬ ಆತನ ಸ್ಪಷ್ಟ ಅಭಿಪ್ರಾಯ ಈ ಸವಾಲಿನಲ್ಲಿ ಅಡಗಿದೆ

ದೇವರು ನಮಗೆ ಈ ದೇಹವನ್ನು ಕೊಟ್ಟು ನೀನು ಇಂಥ ಬಾಳನ್ನು ಬಾಳು ಎಂದು ಅನುಗ್ರಹಿಸಿದ್ದಾನೆ. ಇದು 'ಅವನು ಕೊಟ್ಟ ಕುದುರೆ'. ಇದನ್ನು ನಾವು ಏರಿ ಬಾಳಪಥದಲ್ಲಿ ಸಾಗಬೇಕು. ಅದು ಬಿಟ್ಟು 'ನಮಗೆ ಇದು ಬೇಡ. ಇನ್ನೊಂದು ಬೇಕು' ಎಂದರೆ ಹೇಗೆ? ಅದಕ್ಕೇ ಅಲ್ಲಮಪ್ರಭು ಹೀಗಂದಿರುವುದು:

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವವನು
ವೀರನೂ ಅಲ್ಲ, ಧೀರನೂ ಅಲ್ಲ.
ಇದು ಕಾರಣ ನೆರೆ ಮೂರು ಲೋಕವೆಲ್ಲವೂ
ಹಲ್ಲಣವ ಹೊತ್ತುಕೊಂಡು ಬಳಲುತ್ತೈದಾರೆ
ಗುಹೇಶ್ವರನೆಂಬ ಲಿಂಗವನವರೆತ್ತ ಬಲ್ಲರೋ.

'ಪಾಲಿಗೆ ಬಂದದ್ದು ಪಂಚಾಮೃತ'ವೆನಬೇಕು. ಅಷ್ಟೇ ಅಲ್ಲ; ಅದು ಪಂಚಾಮೃತವಾಗುವಂತೆ ಶ್ರಮಿಸಬೇಕು. ಅದೇ ಜೀವನದ ಪರಮಧ್ಯೇಯ. ತನುಗುಣಗಳಿಗೆ ಹೆದರಿ ನನಗೆ ಈ ಕಾಯ ಬೇಡವೆಂದರೆ, ಕುದುರೆಯ ಮೇಲೆ ಹಲ್ಲಣ ಹಾಕಿ ಸಜ್ಜುಗೊಳಿಸಿ ಅದರ ಮೇಲೆ ಏರಿ ಸವಾರಿ ಮಾಡದೆ, ಹಲ್ಲಣವನ್ನು ತಾನೇ ಹೊತ್ತು ಕುದುರೆಯನ್ನು ಹತ್ತದೆ ನಡೆಯುವ ಮೂರ್ಖರು ನಾವಾಗುತ್ತೇವೆ. ದಾಸವರೇಣ್ಯರು ಹೇಳಿದಂತೆ 'ಮಾನವ ಜನ್ಮ ದೊಡ್ಡದು'. ಇಹವಿರುವುದು ಅದನ್ನು ಸಾರ್ಥಕಪಡಿಸಿಕೊಳ್ಳಲು ನಾವು ಇಲ್ಲಿ, ಈ ದೇಹದೊಡನೆ, ಇರಬೇಕು, ಇದ್ದು ಜೈಸಬೇಕು.

ಈ ದೇಹವನ್ನು, ಎಷ್ಟೇ ದೌರ್ಬಲ್ಯಗಳಿರಲಿ, ಒಂದು ಪವಿತ್ರ ದೇಗುಲವನ್ನಾಗಿ ಮಾಡಿ ಅದನ್ನು ಭಗವಂತನ ನೆಲೆಯಾಗಿಸುವುದು ಸಾಧ್ಯವೆಂಬುದನ್ನು ನರನಾಗಿಯೇ ಜನಿಸಿ ಹರನ ಮಟ್ಟಕ್ಕೇರಿ ನಿಂತ ಶರಣ–ಸಂತರು ದೃಷ್ಟಾಂತಪೂರ್ವಕವಾಗಿ ಮನವರಿಕೆ ಮಾಡಿದ್ದಾರೆ. ನಮ್ಮ ತನು ಹಾಗೂ ಮನಗಳು ಶುದ್ಧನಾಗಿದ್ದರೆ ದೇವರು ನಮ್ಮಲ್ಲಿ ಇರುತ್ತಾನೆಂಬುದನ್ನು ಬಸವಣ್ಣನವರು ತಿಳಿಸಿರುವುದು ಹೀಗೆ:

(40ನೇ ಪುಟನೋಡಿ)

# ಸವ ಪ್ರತಿಜ್ಞಾ

—ಟಿ. ಎನ್. ಮಹಾದೇವಯ್ಯ

"ಹೊನ್ನಿನೊಳಗೊಂದೊರೆಯು, ಸೀರೆಯೊಳಗೊಂದೆಳೆಯು, ಇಂದಿಂಗೆ
ಂಗೆ ಬೇಕೆಂದೆನಾದರೆ, ನಿಮ್ಮಾಣೆ ನಿಮ್ಮ ಪುರಾತನರಾಣೆ. ನಿಮ್ಮ ಶರಣರಿಗ
ಮತ್ತೊಂದುವನರಿಯೆ ಕೂಡಲ ಸಂಗಮದೇವಾ!"

ಭೋಗಲಾಲಸತೆಯು ಮನುಷ್ಯ ಜೀವನಕ್ಕೆ ನಿಜವಾದ ಸವಿಯನ್ನು ಉಣ್ಣಿಸ ದು. ಧನ ಧಾನ್ಯಾದಿ ಸಂಪತ್ತು ಜೀವನನ್ನು ಸಂಕಟಕ್ಕೆ ಸಿಕ್ಕಿಸಿ ಸರಳ ಜೀವ ನ್ನು ವಿಶ್ರವಾಗಿಯೂ, ಕಂಟಕಯುಕ್ತವಾಗಿಯೂ ಮಾಡುವುದು. ವಿಷಯಾ ಲ್ಲಾಗಲಿ, ಐಶ್ವರ್ಯದಲ್ಲಾಗಲಿ, ಮನುಷ್ಯನ ಮನಸ್ಸು ವ್ಯವಹರಿಸಿದ ಕೂಡಲೆ ನ ಸುಂದರ ದರ್ಶನಕ್ಕೆ ಕಲಂಕ ಹತ್ತುವುದು ಸತ್ಯದ ಸಂಗೀತ ನಿನಾದವು ದೂರವಾಗುವುದು. ಸ್ವಾರ್ಥ ಜೀವನವು ಜೀವನನ್ನು ಆಶ್ರಯಿಸುವುದು. ಸಂಸಾ ದ್ದುಕೊಂಡು ಎಲ್ಲವನ್ನೂ ಪರಹಿತಕ್ಕಾಗಿ ತ್ಯಜಿಸುವನೇ ಮಹಾಪುರುಷ. ಅದೇ ವಾದ ಸ್ವಾರ್ಥತ್ಯಾಗ. ಸ್ವಾರ್ಥದ ಸಾಧಾರಣ ಸುಖವು, ಸ್ವಾರ್ಥತ್ಯಾಗದ ಾ ಸುಖದ ಮುಂದೆ ಕರಗಿ ನೀರಾಗಿ ಹೋಗುವುದು. ನಿಜವಾದ ಆನಂದ, ಗಳನ್ನು ಕೊಡುವುದು ತ್ಯಾಗದ ಅನುಷ್ಠಾನ. ಅದೇ ನಿಜವಾದ ಯೋಗ. ಮಿರಾಮತೀರ್ಥರು ಇತೆಂದು ನುಡಿದಿರುವರು. "ಸಮಾಜದಿಂದ ದೂರಿರುವವ ಮಾತ್ರ ತ್ಯಾಗಿ ಅಥವಾ ಸನ್ಯಾಸಿಯೆನ್ನುವುದಿಲ್ಲ. ಸಮಾಜದಲ್ಲಿದ್ದರೂ ್ಯೇಕ ಒಂದು ವಸ್ತುವಿನ ಲೋಭವನ್ನು ಮತ್ತು ತನ್ನ ಸ್ವಂತ ದೇಹದ ಮೇಲಿನ ಮತೆಯನ್ನು ಅಥವಾ ಅಭಿಮಾನವನ್ನು ಬಿಟ್ಟು ನಡೆಯುವವನೇ ತ್ಯಾಗಿ ಅಥವಾ ್ಯಾಸಿಯೆಂದು ಅನ್ನತಕ್ಕದ್ದು." ಬಸವೇಶ್ವರನ ಈ ನುಡಿಗಳು ಅವನ ನಿಸ್ಪೃಹತೆ ಗೂ ತ್ಯಾಗದ ನಿಜತ್ವವನ್ನು ತೋರಿಸುತ್ತವೆ.

ಇಂಥ ತ್ಯಾಗವೇ ದೇವನನ್ನು ಅರಿಯುವವರಿಗೆ ಮೂಲ ಸಾಧನೆ. ಇದೇ ದಾಂತಿಗಳ ವೈರಾಗ್ಯ. ಒಂದು ಬಾರಿಗೆ ತ್ಯಾಗಮಾಡಿದೆನೆಂದರೆ ಮತ್ತೆ ಅದರ ್ಗೆ ಯೋಚಿಸುವನು. ಬಹಳ ನೀಚನಾಗುತ್ತಾನೆ. ನಗುನಗುತ ಆನಂದದಿಂದ ವನ್ನೂ ತ್ಯಜಿಸುವುದೇ ಜೀವನ ಹಿರಿಮೆ. ಇದನ್ನು ಕವಿ ರವೀಂದ್ರರು ಇಂತು ಡಿದಿರುವರು. "Leave all the burdens on his hands who n bear all, and never look behind in regref." ನಿನ್ನ ೊರೆಯನ್ನೆಲ್ಲಾ ಹೊರಬಲ್ಲವನಾದ ದೇವಕೃಪೆಯಲ್ಲಿಡು ಮತ್ತು ನೆನೆದು ಹಿಂತಿರುಗಿ ೋಡಬೇಡ. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳ ಕರ್ತೃವಾದ ಪರಮಾತ್ಮನು ್ಯಾಗಿಗೆ ಹೇಗೆ ದುಃಖಕೊಡಬೇಕು ಎನ್ನುವುದನ್ನು ತಾನು ಸ್ವೀಕರಿಸುವನು. ಅದ

ಕ್ಕಾಗಿಯೇ ದೇವರ ದಾಸಿಮಯ್ಯನವರು ಹೀಗೆಂದಿರುವರು. "ಇಂದಿಂಗೆ ನಾಳೆಗೆಂದು ಮರುಗಲೇಕೆ? ತದಿಂಕ್ಕುವ ದೇವಂಗೆ ಬಡತನವೇ ಕಾಣಾ ರಾಮನಾಥ." ನಮ್ಮದೆಂಬುದನ್ನೆಲ್ಲಾ ದೇವನ ಮೇಲೆ ಹಾಕಿದರೆ ನಮ್ಮ ರಕ್ಷಣೆಯ ಭಾರವನ್ನು ತಾನೇ ವಹಿಸುವನು. ದೇವನನ್ನು ಮರೆಹೋಗದಾಗ ಜೀವನದಲ್ಲಿ ಆದರ ಭಕ್ತಿಗಳು ಹಿರಿದಾಗುವುವು. ಶ್ರದ್ಧೆಯ ಈ ಜೀವನವು ನಿಷ್ಕಾಭಕ್ತಿಯ ಅವಸ್ಥೆಯನ್ನು ಹೊಂದಿ ಸಮರಸದ ಭಾವನೆಗೆ ಬರಲು ಕಾರಣವಾಗುವುದು.

ಈ ತ್ಯಾಗದಿಂದ ಮನುಷ್ಯನಿಗೆ ಆನಂದ ದೊರಕುವುದು. ಸುಖ ಸಿಕ್ಕುವುದು. ಅದೂ ಶಾಶ್ವತ ಸುಖದ ಅನುಭವವಾಗುವುದು ಅದಕ್ಕಾಗಿಯೇ ಅರವಿಂದ ಘೋಷರ ಇಂತೆಂದಿರುವರು. "When we have passed beyond enjoyings, then we shall have Bliss."- ಎಂದು ಸುಖದಾಶೆಯ ಅವಸ್ಥೆಯನ್ನು ಮೀರುವೆವೋ ಆಗ ಶಾಶ್ವತ ಆನಂದ ದೊರಕುವುದು. ಪರಮಾತ್ಮ ಅಡಿದಾವರೆಗಳ ಬಳಿ ಅರ್ಪಣವು ಬಲವಾದಷ್ಟೂ ಪರಮಾತ್ಮನ ಒಲವು ನಮ್ಮ ಮೇಲೆ ಹೆಚ್ಚುವುದು ಮನುಷ್ಯನ ನಿವೃತ್ತಿಯ ಹಾದಿಯು ಅಗಲವಾಗುವುದು. ಧರ್ಮ ಮಂದಿರದಿಂದ ಸಂಗೀತದ ಮಧುರ ನಿನಾದವು ಕಿವಿದೆರೆಗೆ ಬಂದು ಹಾಡುವುದು. ಜೀವನದ ಸುಗಂಧ ವಾತಾವರಣವು ಹರಡುತ್ತ ಅವನ ಬಳಿ ಸಾಗುವುದು. ಈ ಅವಸ್ಥೆಯನ್ನು ಅರ-ವಿಂದಘೋಷರು ಇಂತೆಂದು ವರ್ಣಿಸಿರುವರು. "The more complete your faith Sincerity and surrender, the more will grace and protection be with you." ನಂಬಿಕೆ, ಶ್ರದ್ಧೆ, ಶರಣತೆಗಳು– ಹೆಚ್ಚಿದಂತೆಲ್ಲಾ ನಿನ್ನ ಬಗ್ಗೆ ದಯೆ, ರಕ್ಷಣೆಗಳು ನಿನ್ನ ಹತ್ತಿರವೇ ಹೆಚ್ಚು ಇರುತ್ತವೆ. ಈ ಅರ್ಪಣದಿಂದ ಮನುಷ್ಯ ಜೀವನದ ಪರಿವರ್ತನೆಯ ಮೆಟ್ಟಿಲು ಎಲ್ಲಿಯವರೆಗೆ ಏರುವುದೆಂಬುದನ್ನು ಇದರಿಂದ ತಿಳಿಯಬಹುದು.

ನಿಸ್ಪೃಹತೆಯ ಚರಮ ಸೀಮೆಯಲ್ಲಿ ಅಡಿಯಿಟ್ಟಲ್ಲಿ, ಎಲ್ಲಿ ಐಶ್ವರ್ಯಗಳು ಪರಹಿತಕ್ಕಾಗಿ, ಜಗತ್ತಿನ ಕಲ್ಯಾಣಕ್ಕಾಗಿ ಅರ್ಪಣವಾಗದ ಹೊರತು. ಜೀವನ ದೇವರ ಸಮರಸತೆಯಾಗಲಾರದೆಂಬುದನ್ನು ಈ ವಚನದಲ್ಲಿ ಬಸವೇಶ್ವರನು ತೋರಿರುವನು ತನ್ನ ತ್ಯಾಗ ಬುದ್ಧಿಯನ್ನು ಪ್ರತಿಜ್ಞೆಮಾಡಿ ನುಡಿದಿರುವ ಅವನ ಆತ್ಮಬಲವು ನಿಜವಾಗಿಯೂ ಮಹತ್ವದ್ದಾಗಿರುತ್ತದೆ.

"ಎಲೈ ಪರಮಾತ್ಮನೆ. ಚಿನ್ನದೊಳಗಿನ ಒಂದು ಒರೆಯನ್ನಾಗಲಿ, ಸೀರೆಯೊಳಗಿನ ಒಂದು ಎಳೆಯನ್ನಾಗಲಿ, ಇಂದಿಂಗೆ ಅಥವಾ ನಾಳೆಗಾಗಿ ನನಗೆ ಬೇಕೆಂದೆನಾದರೆ ನಿನ್ನಾಣೆಯಿರಲಿ. ಹಾಗೂ ನಿನ್ನ ಪ್ರಮಥರ ಆಣೆಯಿರಲಿ. ಎಲ್ಲವನ್ನೂ ನಿನ್ನ ಭಕ್ತರ ಚರಣ ತಲಗಳಲ್ಲಿ ಅರ್ಪಿಸುವೆನು" ಎಂದು ತನ್ನ ಅನುಭವವನ್ನು ನುಡಿಗಳ ಮೂಲಕ ಹೊರಗೆಡವಿರುವನು.

ಧಾರಾವಾಹಿ–2

# ತ್ರಳಿರು-ತೋರಣ

(ಸಾಮಾಜಿಕ ಕಿರು ಕಾದಂಬರಿ)

—ಎನ್. ಎಸ್. ಗದಗಕರ
ಶನಿವಾರ ಪೇಟೆ, ನವಲೂರು ಅಗಸೆ, ಧಾರವಾಡ.

ಸಂಜೆಗೆ ಮೋಹನರಾಯರು ಬಸವಂತರಾಯರೊಡನೆ ದಿನಾಲು ಬಾಳಣ್ಣನ ಚಹದಂಗಡಿಗೆ ಹೋಗಲು ತಪ್ಪುತ್ತಿರಲಿಲ್ಲ. ಶ್ರೀಕಾಂತನನ್ನು ರಾಯರು ಯಾವಾಗಾದರೊಮ್ಮೆ ಅಲ್ಲಿ ಕರೆದೊಯ್ಯುತ್ತಿದ್ದರು. ಒಮ್ಮೆ ಬೇರೆ ಗೆಳೆಯರೊಡನೆ ಶ್ರೀಕಾಂತ ಅಂಗಡಿಯಲ್ಲಿ ಕಾಲಿಟ್ಟು ಉಪಹಾರ ಮಾಡಿದ್ದರಿಂದ ರಾಯರು ಸಿಟ್ಟಿಗೆದ್ದು ಅವನ ಕೆನ್ನೆಗೆ ಒಂದೇಟು ಕೊಟ್ಟಿದ್ದರು. ಅದೆಲ್ಲ ಐತಿಹಾಸಿಕ ಘಟನೆ, ಆದರೆ ಆ ನಯ ಭಯಗಳೇ ಶ್ರೀಕಾಂತನನ್ನು ಇಂದು ಸಮಾಜದಲ್ಲಿ ಘನವಾನ ಮಟ್ಟಕ್ಕೊಯ್ದು ಮುಟ್ಟಿಸಿವೆ. ಆಗ ಬೈದು ಬಡಿದು ಬುದ್ಧಿ ಹೇಳಿದುದು ಈಗ ಸನ್ಮಾರ್ಗ ತೋರಿಸಿದಂತಾಗಿದೆ.

ಆ ಬಾಳಣ್ಣನ ಅಂಗಡಿ ಇಂದು ಬದಲಾಗಿದೆ. ಅಲ್ಲಿ ಬಿಳಿ ಛಾಯೆಯ "ಉಡುಪಿ ಬ್ರಾಹ್ಮಣರ ಟೀ ಕ್ಲಬ್" ಬಂದಿದೆ. ಹಿಂದಕ್ಕೆ ಅದರೊಡೆಯ ಬಾಳಣ್ಣ ನಾಮಾಂಕಿತ ವ್ಯಕ್ತಿಯಾಗಿದ್ದ. ಅವನೇನೊ ಅನ್ಯ ಜಾತಿಯ ಕುರೂಪಿ, ವಿಧವಾ ಮಹಿಳೆಯನ್ನು ಮದುವೆಯಾಗಿದ್ದರೂ ತನ್ನ ಅಂಗಡಿ ವ್ಯವಹಾರದಲ್ಲಿ ಲೋಕಪ್ರಿಯತೆ ಗಳಿಸಿದ್ದನು. ಸಕ್ಕರೆಗೆ ಇರುವೆಗಳು ಮುಕುರುವಂತೆ ಗಿರಾಕಿಗಳು ಅವನಲ್ಲಿಗೆ ಬರುತ್ತಿದ್ದವು. ದೋಸೆ, ಇಡ್ಲಿ, ಶಿರಾಗಳ ದಿನಮಾನ ಅಲ್ಲ ಅವು! ಆ ಅಂಗಡಿಯ "ಕಾಯಂ" ಗಿರಾಕಿ ಆಗುವದು ದೌಲತ್ತು, ವಿಲಾಸದ ಲಕ್ಷಣವಾಗಿತ್ತು. ಸಾಮಾನ್ಯರು ಅವರ ಬಳಿ ಹಾಯಲು ಹಿಂಜರಿಯುತ್ತಿದ್ದ ಕಾಲವದು. ಮಡಿವಂತರು ಬಾಳಣ್ಣನ ಹೆಸರು ಕೇಳಿದಾಗ ಮೈಲಿಗೆ ಆಯಿತು ಅನ್ನುತ್ತಿದ್ದರು!

ಮಧುಗಿರಿಯಲ್ಲಿ ಪ್ರೌಢಶಾಲೆ ಇಲ್ಲವೆಂದು ಶ್ರೀಕಾಂತನು ತನ್ನ ಇನ್ನೊಬ್ಬ ಸೋದರತ್ತೆ ರಾಮಕ್ಕನ ಬಳಿಗೆ ಚಿತ್ರದುರ್ಗಕ್ಕೆ ಹೋದುದು ಅವನ ಜೀವನದ ಒಂದು ವಿಶಿಷ್ಟ ಘಟ್ಟವೇ ಆಯಿತು. ತಮ್ಮ, ಅಕ್ಕ, ತಂಗಿ, ತಂದೆ–ಎಲ್ಲರನ್ನು ಬಿಟ್ಟು ಪರಸ್ಥಳದಂತಿದ್ದ ಸೋದರತ್ತೆಯ ಮನೆಯಲ್ಲಿ ವಾಸಿಸುವದು ಅವನಿಗೆ ಜೀವದ ಸುತ್ತು ಬಂದಿತ್ತು. ಆ ಅತ್ತೆ ಏನೊ ಒಳ್ಳೆಯವರು, ಆಕೆಯ ಗಂಡ ಮುರುಲೀಧರರಾಯರೂ ಸಂಭಾವಿತರು. ಆದರೆ ಅವರಿಗೆ ಸಣ್ಣ ಪಗಾರದಲ್ಲಿ ಸಾಕಷ್ಟು ಮಕ್ಕಳು ಮರಿ ಇರುವಾಗ ಶ್ರೀಕಾಂತನ ಮೇಲೆ ವಿಶೇಷ ಮಮತೆ ಮಾಡುವದು ಸಾಧ್ಯವಿರಲಿಲ್ಲ. ಅಂತೇ ಅವನಿಗೆ ರವೀಂದ್ರರ ಫಟಿಕ ಚಕ್ರವರ್ತಿಗೆ ಅನಿಸಿದಂತೆ, ಸ್ವಂತ ಮನೆ ಮಧುಗಿರಿಯಲ್ಲಿಯದು ಸ್ವರ್ಗಸದೃಶ ಎನಿಸಿತು. ಒಂದು ಬಿರು ನುಡಿ, ಪರಾಧೀನತೆ ತಡೆದುಕೊಳ್ಳಲು

ಅವನಿಗೆ ಆಗುತ್ತಿರಲಿಲ್ಲ. ತಕ್ಷಣ ಕಣ್ಣೀರು ಕೋಡಿಯೊಡೆದು ಧಾರೆಗಟ್ಟಿ ಸುರಿಯುತ್ತಿದ್ದವು. ಹೀಗೆ ಒಂದು ವರ್ಷ ಗತಿಸಿತು ಕ್ರಮೇಣ ಮುರಲಿಧರರಾಯರು ತಮ್ಮ ಹೊಲದ ಉತ್ಪನ್ನಿನಿಂದ ಸಾಂಪತ್ತಿಕ ಸ್ಥಿತಿಯನ್ನು ಸುಧಾರಿಸಿಕೊಂಡರು. ಚಿತ್ರದುರ್ಗದ ವಿಸ್ತರಣದಲ್ಲಿ ಮನೆ ಕಟ್ಟಿಸಿಕೊಂಡರು. ಹೊಂಗಿನ ಚಿಕ್ಕ ಮನೆಯಲ್ಲಿ ತಾವಿದ್ದು ಮೂಲ ದೊಡ್ಡ ಕಟ್ಟಡವನ್ನು ಬಾಡಿಗೆಗೆ ಕೊಟ್ಟರು.

ಶ್ರೀಕಾಂತನು ಯಾಂತ್ರಿಕವಾಗಿ ಅಡುಗೆಯ ಕೆಲಸದಲ್ಲಿ ತೊಡಗಿ ಊಟ ಮುಗಿಸಿ ಮಲಗಿದಾಗ ನಿದ್ರೆ ಬೇಗ ಹತ್ತಿತು. ಮುಂಜಾವು ಇನ್ನೂ ನಸುಕು ಹರಿಯುತ್ತಿರುವಾಗ ಎಚ್ಚರಾಯಿತು. ಚಹದನಂತರ ಮುಂಜಾವಿನ ಚಟುವಟಿಕೆ ತೀರಿಸಿ, ಸ್ನಾನವಾದೊಡನೆ ಅದೇ ಬಂದ "ಸಂಯುಕ್ತ ಕರ್ನಾಟಕ" ದಿನಪತ್ರಿಕೆ ಓದುತ್ತಿರುವಾಗ ಏಕೊ ಉತ್ಸಾಹ ತುಂಬಿತು ಮೈಯಲ್ಲಿ. ಬೇಗ ಬೇಗ ವೇಷ ಮಾಡಿಕೊಂಡು ಉಪಹಾರವನ್ನು ತನ್ನ ನಚ್ಚಿನ ಹೋಟೆಲ್ಲಿನಲ್ಲಿಯೇ ತೀರಿಸಿ ಊರಿಂದ ಎರಡು ಮೈಲಿ ದೂರ ಇರುವ ಕಪಿಲಾ ಬಾವಿಯ ಕಡೆಗೆ ಹೊರಟನು. ಅದು ಸುಂದರವಾದ ನೈಸರ್ಗಿಕ ಸ್ಥಳ. ಬಳಿಯಲ್ಲಿಯೇ ಶಿವಾಲಯ ಜುಳು ಜುಳು ಹರಿವ ಝರಿ. ಒಳಗಿನ ಪೌಳಿಯಲ್ಲಿ ವಿಶ್ರಮಿಸಿದನು, ರೂಢಿಯಂತೆ ಸಿಗರೇಟು ಹಚ್ಚಿದನು. ಆದರ ಹೊಗೆಯ ಸುರುಳಿಗಳ ಗುಂಟ ನೆನಪಿನ ಸರಪಳಿ ಹೊರಹೊಮ್ಮಿತು. ಸಹಜವಾಗಿ ಅವನಿಗೆ–ಮೋಹನರಾಯರಿಗೆ ವರ್ಗವಾದ–ಭದ್ರಗಿರಿಯ ನೆನಪು ಮರುಕಳಿಸಿತು. ಅಲ್ಲಿಯೇ ಶ್ರೀಕಾಂತ ಮಾಧ್ಯಮಿಕ ಶಿಕ್ಷಣ ಮುಂದುವರಿಸಿದುದು--ಚಿತ್ರದುರ್ಗದ ನಂತರ.

ಭದ್ರಗಿರಿ ಮಲೆನಾಡಿನ ಸೆರಗಿನ ಸ್ಥಳ. ಪ್ರೌಢ ಶಾಲೆಗಳೂ ಕಾಲೇಜುಗಳೂ ಇದ್ದ ನಗರ. ಶ್ರೀಕಾಂತನು ಕಿಲ್ಲೆಯ ಆ ವಾರದಲ್ಲಿಯ ದೇಶೀಯ ಪ್ರೌಢಶಾಲೆಗೆ ಹೋದನು. ಅದರ ಸಂಚಾಲಕರು, ಅಧ್ಯಾಪಕ ವರ್ಗ ರಾಷ್ಟ್ರೀಯ ಮನೋವೃತ್ತಿಯುದು. ಆ ಶಾಲೆಯಲ್ಲಿ ಶ್ರೀಕಾಂತನು ಕಳೆದ ಐದಾರು ವರ್ಷ ಮರೆಯದಾಗಿದ್ದ. ಎಂತಹ ಉನ್ಮಾದಕಾರಿ ವಾತಾವರಣ ಅಲ್ಲಿಯದು! ಅಸಹಕಾರಾದೋಲನದ ಕರೆಗೆ ಓಗೊಟ್ಟ ಕೃಷ್ಣಮೂರ್ತಿ–ಮೋಹನರಾಯರ ಅಳಿಯ–ಈಗ ಖಾದಿ ಉಡುಪಿಗೆ ಮನ ಸೋತ. ಊರಲ್ಲಿಯ ಅಚ್ಚುಕೂಟ ಒಂದರಲ್ಲಿ ನೌಕರಿಗೆ ನಿಂತ. ಈ ಉದ್ಯೋಗಕ್ಕಾದರೂ ಅಳಿಯ ಹತ್ತಿದುದು ರಾಯರಿಗೆ ಸರಿಕಂಡರೂ ಗಾಂಧೀಜಿಯ ಅನುಯಾಯಿ ಆದುದು ಅವರಿಗೆ ರುಚಿಸಲಿಲ್ಲ. ಸರಕಾರದ ಗುಲಾಮಗಿರಿಯ ನೌಕರಿಗೆ ಮಾರು ಹೋದ ಅವರಿಗೆ ಕೃಷ್ಣಮೂರ್ತಿಯ ಸ್ವಭಾವ ಸರಿಹೋಗುವುದೆಂತು? ಅಂತೇ ಆಗೊಮ್ಮೆ ಈಗೊಮ್ಮೆ ಮಾವ ಅಳಿಯಂದಿರಲ್ಲಿ "ರಸಕಸಿ" ಇದ್ದದೇ "ಆದರೂ ಹಗ್ಗ ಹರಿಯಲಿಲ್ಲ, ಕೋಲು ಮುರಿಯಲಿಲ್ಲ" ಎಂಬಂತೆ ಅವರ ''ವಾಚಾ ಘಾಚಿ'' ನಿರಂತರ ಮುಂದುವರಿಯುತ್ತಿತ್ತು.

ಶ್ರೀಕಾಂತನ ಹೈಸ್ಕೂಲು ಜೀವನ ಭದ್ರಗಿರಿಯಲ್ಲಿ ರಂಗಿನದಾಗಿತ್ತು. ಉದ್ವೇಗ ಜನಕವಾಗಿತ್ತು, ಹೆಜ್ಜೆ ಹೆಜ್ಜೆಗೆ ಅಲ್ಲಿ ರಾಷ್ಟ್ರೀಯ ಮನೋವೃತ್ತಿ ದೇಶದ ರಕ್ಷಣೆಗೆ ಪ್ರೋಷಕವಾದ ಯೋಜನೆಗಳೇ ಅಲ್ಲಿ ಮೂರ್ತಿವೆತ್ತು ನಿಂತಿರುತ್ತಿದ್ದವು. ಆರೋಗ್ಯ ರಕ್ಷಣೆಗಾಗಿ ವ್ಯಾಯಾಮ ಮೊದಲನೆಯದಾಗಿತ್ತು. ಅಲ್ಲಿಯ ಗುರು ವೃಂದ ಕೂಡ ಸಂಸ್ಮರಣೀಯವಾಗಿತ್ತು.

ಶ್ರೀಕಾಂತನ ಮೇಲೆ ಅನುಪಮ ಪ್ರಭಾವ ಬೀರಿದ ವ್ಯಕ್ತಿ (ಶಕ್ತಿ?) ಎಂದರೆ ರಾಮನಾರಾಯಣ ಗುರುಗಳು. ಅವರು ಕೇವಲ ಗುರುಗಳಾಗಿರಲಿಲ್ಲ, ನಾಡುನುಡಿಯ ಸಮ್ಯಗ್ ಪ್ರಜ್ಞೆಯುಳ್ಳ ಮಹಾನುಭಾವರಾಗಿದ್ದರು. ಅಸಹಕಾರಾಂದೋಲನದಲ್ಲಿ ಧುಮುಕಿ ಆರು ತಿಂಗಳ ಕಾಲ ಸಶ್ರಮಶಿಕ್ಷೆ ಅನುಭವಿಸಿದ್ದರು. ಈಗ ಅವರಿನ್ನೂ ಜೀವಂತ ಇದ್ದರೂ ದೇಶಸೇವೆ ಮಾಡಿರುವೆನೆಂದು ಹೇಳಿ ನಿವೃತ್ತಿ ವೇತನ ಪಡೆಯಲು ಬಯಸಿದವರಲ್ಲ. ಸ್ವಾತಂತ್ರ್ಯಕ್ಕಾಗಿ ಹೋರಾಡಿದೆನೆಂದು ಸಾರಿ ಪ್ರತಿಫಲವನ್ನು ಅಪೇಕ್ಷಿಸಲಿಲ್ಲ. ಅವರು ಆ ಕಾಲಕ್ಕೆ ಎಂ.ಎ. ಪದವಿ ಪಡೆದಿದ್ದರು. ಬಿ.ಇಡಿ ಅವರಿಗೆ ಅನಾವಶ್ಯಕ ಎನಿಸಿತು. ಕಲಿಯಲು ಹೋಗಲಿಲ್ಲ, ತಾವು ಹುಟ್ಟು ಶಿಕ್ಷಕರಿರುವೆ ಎಂದು ಗ್ರಹಿಸಿ ಅತ್ತಕಡೆಗೆ ಅವರು ಮನಸ್ಸು ಹಾಕಲಿಲ್ಲ. ಸರಕಾರವೂ ಚಾಣಾಕ್ಷತನ ದಿಂದ ಅವರನ್ನು ಒತ್ತಾಯಪಡಿಸಲಿಲ್ಲ. ಬೇಕಾದರೆ ತರುಣ ಶಿಕ್ಷಕರು ಶೈಕ್ಷಣಿಕ ಪದವಿ ಗಳಿಸಿ ಕೃತಾರ್ಥರಾಗಲಿ ಎಂದು ಹಾರೈಸಿದರು!

ರಾಮನಾರಾಯಣರು ನಖಶಿಖಾಂತ ಗುರುಗಳು. ಒಂದು ಕ್ಷಣವೂ ವ್ಯರ್ಥ ಕಳೆದು ಅವರಿಗೆ ಗೊತ್ತಿರಲಿಲ್ಲ. ಸೋಮಾರಿ ಮನಸ್ಸಿದ್ದರೆ ಕುತ್ಸಿತ ವಿಚಾರಗಳು ಬರುವವೆಂದು ಅವರಿಗೆ ಗೊತ್ತು ಜ್ಞಾನಾರ್ಜನೆ ಅವರ ನಿರಂತರ ಗುರಿ ಇದ್ದಿತು. ಅಡಿ ಗಡಿಗೆ ತಮ್ಮನ್ನು ತಿದ್ದಿಕೊಳ್ಳುತ್ತಿದ್ದರು. ಅವರಿಗೆ "ಮರಿಗಾಂಧಿ" ಎಂಬ ಹೆಸರು ಚಕ್ಕೂ ಅನ್ವಯಿಸುತ್ತಿತ್ತು. ಅದರ ಬಾಹ್ಯ ಚಿಹ್ನವೆಂಬಂತೆ ಸಂಪೂರ್ಣ ಖಾದಿ ಉಡುಗೆ ತೊಡುತ್ತಿದ್ದರು. ಸಂಸ್ಕೃತ ಅವರ ಮನೆತನದ ವಿಷಯ, ಮ್ಯಾಟ್ರಿಕ್ ಪರೀಕ್ಷೆಯಲ್ಲಿ ವಿಶೇಷ ಪ್ರಾಶಸ್ತಿ ಪಡೆದು "ಶಂಕರಶೇಟ್" ಶಿಷ್ಯ ವೃತ್ತಿ ಪಡೆದಿದ್ದರು. ಆದರೆ ಆ ಅಭಿಮಾನದ ಮಿಂಚು ಅವರ ಮೊಗದ ಮೇಲೆ ಗೋಚರಿಸುತ್ತಿರಲಿಲ್ಲ. ಅಹಂಕಾರಾಭಿಮಾನಕ್ಕೂ ಅವರ ಸ್ವಾಭಾವಕ್ಕೂ ಹೊಂದಾಣಿಕೆ ಇರಲಿಲ್ಲ! ಶಾಲೆಯಲ್ಲಿ ಕೊಟ್ಟ ಮನೆಕೆಲಸವನ್ನು ಮಕ್ಕಳು ನಿರ್ವಹಿಸಿಕೊಂಡು ಬಂದಿರದಿದ್ದರೆ ತಾವೇ ಅಂದು ಒಂದೇ ತಾಸು ವರ್ಗದಲ್ಲಿ ನಿಂತುಬಿಡುತ್ತಿದ್ದರು. ತಮ್ಮನ್ನೇ ತಾವು ಶಿಕ್ಷಿಸಿಕೊಳ್ಳು ತ್ತಿದ್ದರು, ಇದಕ್ಕೂ ಹೆಚ್ಚಿನ ನೈತಿಕ ಮಾರ್ಪಾಟು ಆಗಬೇಕಿದ್ದರೆ ಉಪವಾಸ ಕೈಕೊಳ್ಳುತ್ತಿದ್ದರು. ಇದರಿಂದ ವಿದ್ಯಾರ್ಥಿಗಳು ನಾಚಿ ತಾವೇ ಹಾದಿಗೆ ಬರುತ್ತಿದ್ದರು!

ರಾಮನಾರಾಯಣರು ವಿದ್ಯಾರ್ಥಿಗಳನ್ನು ತಮ್ಮ ಮಕ್ಕಳೆಂದು ಪರಿಗ್ರಹಿಸು ತ್ತಿದ್ದರು. ಎಲ್ಲರೂ ಒಂದೇ ಕುಟುಂಬದವರೆಂದು ತಿಳಿಯುತ್ತಿದ್ದರು. ತಮ್ಮ ಸುಖ ದುಃಖಗಳನ್ನು ಬಹಿರಂಗವಾಗಿ ಅವರೆದುರು ನಿವೇದಿಸುತ್ತಿದ್ದರು. ಮುಚ್ಚು ಮರೆ

ಎಂಬುದು ಕೇಳಬಾರದು. ವರ್ಷಕ್ಕೊಮ್ಮೆ ತಮ್ಮ ಹುಟ್ಟುಹಬ್ಬವನ್ನು ಮನೆಯಲ್ಲಿ ಆಚರಿಸುವಾಗ-ಶಾಲೆಯ ಆವಾರಣದಲ್ಲಿಯೇ ಅವರ ಮನೆ-ವರ್ಗದ ಛಾತ್ರ ಗಣ ವನ್ನೆಲ್ಲ ಉಪಹಾರಕ್ಕೆ ಕರೆಯುತ್ತಿದ್ದರು. ಆಗ ಎಲ್ಲರ ಯೋಗಕ್ಷೇಮ ಕೇಳಿಕೊಳ್ಳು ತ್ತಿದ್ದರು. ಅವರ ನಡೆ ನುಡಿಯಿಂದಲೆ ವಿದ್ಯಾರ್ಥಿಗಳು ತಾವು ಮಾದರಿಯ ಪಾಠ ಗಳನ್ನು ಕಲಿಯುತ್ತಿದ್ದರು. ಸುಳ್ಳು ಹೇಳುವದು, ಪರೀಕ್ಷೆಯಲ್ಲಿ ನಕಲು ಮಾಡುವದು ಅವಾಚ್ಯ ನುಡಿಯುವದು, ಅಶಿಸ್ತು ತೋರುವದು-ಅವರೆದುರಿಗೆ ಯಾವ ವಿದ್ಯಾರ್ಥಿಗೂ ಸಾಧ್ಯವಿರುತ್ತಿರಲಿಲ್ಲ.

ರಾಮನಾರಾಯಣರು ವರ್ಗದಲ್ಲಿ ಪಾಠ ಹೇಳಲು ನಿಂತರೆ ಮೈಮರೆತು ಬಿಡು ತ್ತಿದ್ದರು. ಅದರಲ್ಲಿ ತನ್ಮಯರಾಗಿ ಬಿಡುತ್ತಿದ್ದರು, ಪದ್ಯ ಬಂದರಂತೂ ತಪ್ಪದ ಸುಶ್ರಾವ್ಯವಾಗಿ ಅನ್ನುತ್ತಿದ್ದರು. ಕೇವಲ ಅವರ ಭಾವಪೂರ್ಣ ಓದುಕೇಳಿ ಮೇಲಿನ ಶಿಕ್ಷಣಾಧಿಕಾರಿಗಳು ದಂಗುಬಡಿದು ನಿಲ್ಲುತ್ತಿದ್ದರು. ಇಂಗ್ಲೀಷ್, ಕನ್ನಡ, ಸಂಸ್ಕೃತ- ಎಲ್ಲದರಲ್ಲಿಯೂ ಎತ್ತಿದಕೈ. ಅವರು ಸವ್ಯಸಾಚಿ, ವಿದ್ಯಾರ್ಥಿಗಳಿಗೆ ಶಿಬಿರ ಜೀವನದ (Camp life) ಕಠೋರ ಶಿಸ್ತನ್ನು ಸಹ ಅವರು ಕಲಿಸಿದರು. ಹೆಚ್ಚೇನು? ಹಲವ ರಂತೂ ಅವರನ್ನು ತಂದೆಯೋಪಾದಿ ತಿಳಿದಿದ್ದರು. ಇಂತಹ ರಾಮನಾರಾಯಣರ ಏರುಂಜವ್ವನದ ಮಗ ಸಾಂಬಮೂರ್ತಿ ಅಸಹಕಾರಾಂದೋಲನದಲ್ಲಿ ಧುಮುಕಿ ಸತ್ಯಾ ಗ್ರಹಿಯಾಗಿ ಹೋರಾಡಿ ಮರಳಿ ಬಂದು ಹಾಸಿಗೆ ಹಿಡಿದು ನಿಧನಹೊಂದಿದಾಗ ವಿದ್ಯಾರ್ಥಿ ಎಂಬ ಮಾನದಿಂದ ಶ್ರೀಕಾಂತ ಗೋಳಿಟ್ಟ. ಅವನು ಅವರ ಪಟ್ಟದ ಶಿಷ್ಯನೂ ಅಹುದು, ರಾಮನಾರಾಯಣರ ಹೆಂಡತಿಯಂತೂ ಎಂದೊ ತಾರುಣ್ಯದಲ್ಲಿ ಪರಂಧಾಮವನ್ನೈದಿದ್ದಳು. ಇಂತಹ ವಿಪತ್ಪರಂಪರೆ ಬಂದರೂ ನಾರಾಯಣರು ಲೆಕ್ಕಿಸದೆ ಸಾಹಿತ್ಯದ ರಚನೆಯನ್ನು ನಿರರ್ಗಳವಾಗಿ ಗೈದರು. ಮುಖ್ಯವಾಗಿ ಅವರು ಉದ್ಧಾಮ ಕವಿಗಳು. ಅನಂತರ ಪಂಡಿತರು, ವಾಗ್ಮಿಗಳು, ಅವರ ಭಾವಗೀತೆಗಳು ಹೆಸರಿಗೆ ತಕ್ಕಂತೆ ಅವರ ಜೀವನದ ವಿವಿಧ ಮುಖಗಳ ಗ್ರಾಹಕ ಪ್ರತಿರೂಪಗಳಾಗಿದ್ದವು. ಇತ್ತೀಚೆಗೆ ಅವರು ನಾಲ್ಕಾರು ಸಾಮಾಜಿಕ ಕಾದಂಬರಿ ಕೂಡ ಬರೆದುದು ಶ್ರೀಕಾಂತ ನಿಗೆ ಗೊತ್ತು. ಬರೆದದ್ದನ್ನೆಲ್ಲ ಆ ಗುರುಗಳು ಈ ಪಟ್ಟದ ಶಿಷ್ಯ ಶ್ರೀಕಾಂತನಿಗೆ ಮೊಟ್ಟ ಮೊದಲು ಕೊಡುತ್ತಿದ್ದರು. ತಮ್ಮ ಶಿಷ್ಯ "ಪಂಡಿತ ಶಿಖಾಮಣಿ" ಎಂಬ ಗೌರವ ದಿಂದಲ್ಲ. ಸರ್ವಸಾಮಾನ್ಯ ವಿವೇಕಿ ಓದುಗನೆಂದು, ಅಂತಹ ಹಲವಾರು ಅಭಿಪ್ರಾಯ ಗಳಿಂದ ರಾಮನಾರಾಯಣರು ತಮ್ಮನ್ನೇ ತಾವು ತಿದ್ದಿಕೊಳ್ಳುತ್ತಿದ್ದರು. ಸಂಸ್ಕೃತ ದಲ್ಲಿಯೂ ಕೃತಿ ರಚನೆ ಮಾಡುವಷ್ಟು ನೈಪುಣ್ಯ ಪರಿಶ್ರಮ, ಪಾಂಡಿತ್ಯ ಇದ್ದುದು ಅವರ ಶಿಷ್ಯ ಕೋಟಿಗೆ ಗೊತ್ತು. ಸಭಾ ಕಂಪ ಮತ್ತು ಅವರು ಏರುಮಣೆಯ ಮೇಲೆ ನಿಂತೆ. ತಕ್ಷಣ ಗಾವುದ ಗಾವುದ ದೂರ ಓಡುತ್ತಿತ್ತು, ಮುಂದೆ ನಿರರ್ಗಳ ವಾಗ್ ಝರಿ ಹರಿಯುತ್ತಿತ್ತು. ಅವರ ಭಾಷಣವೂ ಪಾಂಡಿತ್ಯ ಪ್ರಚುರವಿರುತ್ತಿತ್ತು.

(ಮುಂದುವರಿಯುತ್ತದೆ)

# ಪ್ರಾಚೀನ ಕರ್ನಾಟಕದ ಶಿಕ್ಷಣ ಸಂಸ್ಥೆಗಳು

—ಬಿ. ಸಿದ್ದಲಿಂಗಯ್ಯ, ಬಿ.ಎ.ಬಿ.ಎಡ್.
ಸಂಪಾದಕ, ಕರ್ನಾಟಕ ಗೆಜೆಟಿಯರ್ ಆಫೀಸ್, ಬೆಂಗಳೂರು.

ಪ್ರಾಚೀನ ಕರ್ನಾಟಕದ ಶಿಕ್ಷಣ ಮತ್ತು ವಿದ್ಯಾಕೇಂದ್ರಗಳ ಬಗ್ಗೆ ತಿಳಿಯುವುದಕ್ಕೆ ಮೊದಲು ಭಾರತದಲ್ಲಿದ್ದ ಶಿಕ್ಷಣದ ವಿಹಂಗಮ ನೋಟವನ್ನು ತಿಳಿಯೋಣ. ಪ್ರಾಚೀನ ಭಾರತದ ವಿದ್ಯಾಭ್ಯಾಸದ ಕೇಂದ್ರಗಳು ಜನರ ಸಾಂಸ್ಕೃತಿಕ ಜೀವನವನ್ನು ರೂಪಿಸುವುದರಲ್ಲಿ ವಿಶಿಷ್ಟ ಸ್ಥಾನ ಪಡೆದಿದ್ದವು. ಋಷಿಗಳ ಆಶ್ರಮಗಳು ಶಿಕ್ಷಣ ಶಾಲೆಗಳಾಗಿದ್ದವು. ಭಾರತೀಯ ಸಂಸ್ಕೃತಿಯು ಋಷಿಗಳ ಆಶ್ರಮದಿಂದ ಪ್ರಾರಂಭವಾಯಿತೆಂದು ವಿಶ್ವಕವಿ ರವೀಂದ್ರರು ಹೇಳಿದ್ದಾರೆ. ಉಪನಿಷತ್‌ಕಾಲದಲ್ಲಿ ಋಷಿಗಳ ಆಶ್ರಮಗಳು ವಿಚಾರ ಕೇಂದ್ರಗಳಾಗಿದ್ದವು.

ಬುದ್ಧನ ಕಾಲದಲ್ಲಿ ಬುದ್ಧವಿಹಾರಗಳು ತಿಳಿವಿನ ಕೇಂದ್ರಗಳಾಗಿಯೂ, ಜೈನ ಬಸದಿಗಳು, ಚೈತ್ಯಾಲಯಗಳು ಜ್ಞಾನಕ್ಕೆ ಆಶ್ರಯ ಸ್ಥಾನಗಳಾಗಿಯೂ ಇದ್ದವು. ಪ್ರಾಚೀನ ಭಾರತದ ಪ್ರಸಿದ್ಧ ವಿದ್ಯಾಕೇಂದ್ರಗಳೆಂದರೆ, ನಲಂದ, ವಲ್ಲಭಿ, ವಿಕ್ರಮಶಿಲಾ ಮತ್ತು ತಕ್ಷಶಿಲಾ; ಬಿಹಾರ್ ರಾಜ್ಯದ ಬಾರಾಗಾಂವ್‌ನಲ್ಲಿದ್ದ ನಲಂದ ವಿಶ್ವವಿದ್ಯಾಲಯದಲ್ಲಿ ಸುಮಾರು ೧೦ ಸಾವಿರ ವಿದ್ಯಾರ್ಥಿಗಳು, ಬಿಕ್ಷುಗಳು ಇದ್ದರಂತೆ. ಇವರಲ್ಲಿ ೧೫೦೦ ಮಂದಿ ಪ್ರಾಧ್ಯಾಪಕರು ಸೇರಿದ್ದರು, ಕೊರಿಯಾ, ಜಪಾನ್, ಮಂಗೋಲಿಯಾ, ಚೀನ, ಟಿಬೆಟ್, ಸಿಂಹಳಗಳಿಂದ ವಿದ್ಯಾರ್ಥಿಗಳು ಇಲ್ಲಿ ಬಂದು ವ್ಯಾಸಂಗ ಮಾಡುತ್ತಿದ್ದರು. ಇಲ್ಲಿದ್ದ ಗ್ರಂಥಾಲಯವು ೯ ಅಂತಸ್ತಿನ ಕಟ್ಟಡವಾಗಿತ್ತು.

ವಲ್ಲಭಿ ವಿಶ್ವವಿದ್ಯಾಲಯ :—ಇದು ಸೌರಾಷ್ಟ್ರದಲ್ಲಿ ಕ್ರಿ.ಶ. ೪೭೫–೭೭೫ ನೆಯ ಕಾಲದಲ್ಲಿತ್ತು. ಇದು ಕೂಡ ನಲಂದ ರೀತಿಯಲ್ಲೆ ಶಿಕ್ಷಣ ನೀಡುತ್ತಿತ್ತು. ಹುಯಿನ್‌ತ್ಸಾಸಾಂಗನು ಇಲ್ಲಿ ೧೦೦ ಸಂಘರಾಮಗಳನ್ನು, ೬ ಸಾವಿರ ಭಿಕ್ಷುಗಳನ್ನು ನೋಡಿದ್ದನು. ಇಲ್ಲಿ ಧಾರ್ಮಿಕ ವಿಷಯಗಳೇ ಅಲ್ಲದೆ, ನ್ಯಾಯ, ಚಿಕಿತ್ಸಾಶಾಸ್ತ್ರ ಮುಂತಾದ ಲೌಕಿಕ ಜ್ಞಾನಗಳಲ್ಲೂ ಶಿಕ್ಷಣ ಸಿಗುತ್ತಿತ್ತು. ನಲಂದವು ಮಹಾಯಾನ ಪಂಥಕ್ಕೆ ಪ್ರಸಿದ್ಧವಾದರೆ, ವಲ್ಲಭಿಯು ಹೀನಯಾನ ಪಂಥಕ್ಕೆ ಖ್ಯಾತಿ ಪಡೆದಿತ್ತು. ವಿಕ್ರಮಶಿಲಾ ವಿದ್ಯಾಲಯವು ಮಗಧ ಬಳಿ ಗಂಗಾನದಿಯ ತಳದಲ್ಲಿ ಸ್ಥಾಪಿಸಿದ್ಧ ಶ್ರೀ ವಿಕ್ರಮಶಿಲಾ ವಿಹಾರವಾಗಿತ್ತು. ಪ್ರಸಿದ್ಧಿಯ ಪ್ರಾಧ್ಯಾಪಕರ ಸಮಿತಿ ಇಲ್ಲಿನ ಶಿಕ್ಷಣ ಕ್ರಮವನ್ನು ನೋಡಿಕೊಂಡಿತ್ತು.

**ತಕ್ಷಶಿಲಾ :—**ಇದು ದೇಶದಲ್ಲೇ ಅತಿ ಹಿರಿದಾದುದು. ಹಿಂದು ಧರ್ಮದ ಜ್ಞಾನ ಕೇಂದ್ರವಾಗಿ ಮೆರೆಯಿತು. ವೈದಿಕ ಪದ್ಧತಿಯ ಶಿಕ್ಷಣ ಇಲ್ಲಾಗುತ್ತಿತ್ತು. ವೇದ, ಸಾಹಿತ್ಯ, ವಿಜ್ಞಾನ, ವೈದ್ಯ, ಕಾನೂನು, ಸೈನಿಕ ಶಿಕ್ಷಣ ಮುಂತಾದ ವಿಷಯ ಗಳ ಬಗ್ಗೆ ವ್ಯಾಸಂಗ ನೀಡುತ್ತಿತ್ತು. ದೇಶ ವಿದೇಶಗಳಿಂದ ಶಿಕ್ಷಣಾರ್ಥಿಗಳು ಇಲ್ಲಿಗೆ ಬರುತ್ತಿದ್ದರು. ಅನೇಕ ರಾಜಕುಮಾರರು ಇಲ್ಲೇ ವ್ಯಾಸಂಗ ಮಾಡುತ್ತಿದ್ದರು. ಚಾಣಕ್ಯ ಅಥವಾ ಕೌಟಲ್ಯನು ಇಲ್ಲಿ ಅಧ್ಯಾಪಕನಾಗಿದ್ದನು. ಇದು ಪ್ರತಿಷ್ಠಿತ ಶಿಕ್ಷಣ ಕೇಂದ್ರವಾಗಿತ್ತು. ಕಾಶಿ, ಮಿಥಿಲಾದ ಪುರಿ, ಕಂಚಿ ಮುಂತಾದವು ಖ್ಯಾತಿವೆತ್ತ ವಿದ್ಯಾಕೇಂದ್ರಗಳಾಗಿದ್ದವು. ಜ್ಞಾನ ಪ್ರಸಾರ ಮಾಡುತ್ತಿದ್ದ ಇಂತಹ ಶಿಕ್ಷಣ ಕೇಂದ್ರ ಗಳು ಭಾರತದ ಕೀರ್ತಿಯನ್ನು ಉತ್ತುಂಗ ಶಿಖರಕ್ಕೇರಿಸಿದ್ದವು. "ತಮಸೋಮ ಜ್ಯೋತಿರ್ಗಮಯ", "ವಿದ್ಯಾ ವಿನಯ ಸಂಪನ್ನ" ಎಂಬುದನ್ನು ಅಳವಡಿಸಿಕೊಂಡಿ ದ್ದವು ಅಂದಿನ ಶಿಕ್ಷಣ ಕೇಂದ್ರಗಳು. ಈ ಎಲ್ಲಾ ಶಿಕ್ಷಣ ಕೇಂದ್ರಗಳು ಪರಕೀಯರ, ಅನ್ಯಮತೀಯರ ಧಾಳಿಗೆ ತುತ್ತಾಗಿ ತಮ್ಮ ವೈಭವವನ್ನು ಕಳೆದುಕೊಂಡವು. ಧರ್ಮ, ಸಂಸ್ಕೃತಿಯ ತಳಹದಿಯ ಮೇಲೆ ಶಿಕ್ಷಣ ಕ್ರಮವನ್ನು ರೂಪಿಸಿ ಶಾಂತಿ, ಸೌಹಾರ್ದ– ಸಹಬಾಳ್ವೆಯ ಜೀವನಕ್ಕೆ ವಿಶ್ವಕ್ಕೆ ಮಾರ್ಗದರ್ಶನ ನೀಡಿರುವ, ನೀಡುತ್ತಿರುವ ಕೀರ್ತಿ ಪ್ರಾಚೀನ ಭಾರತದ ಶಿಕ್ಷಣ ಪದ್ಧತಿಯ ವೈಶಿಷ್ಟ್ಯ.

ನಮ್ಮ ಕರ್ನಾಟಕವು ಕೂಡ ಶಿಕ್ಷಣ ಕ್ಷೇತ್ರದಲ್ಲಿ ತನ್ನದೇ ಆದ ಇತಿಹಾಸ ಹಿರಿಮೆ ಯನ್ನು ಪಡೆದಿದೆ. ಇಲ್ಲೂ ಕೂಡ ಧರ್ಮ, ಸಂಸ್ಕೃತಿಯ ತಳಹದಿಯ ಮೇಲೆ ಶಿಕ್ಷಣದ ವ್ಯವಸ್ಥೆಯಾಗಿತ್ತು. ಸಂಸ್ಕೃತವೇ ಪ್ರಧಾನ ಮಾಧ್ಯಮ ಶಿಕ್ಷಣವಾಗಿತ್ತು.

ಹಿಂದಿನಿಂದಲೂ ಶಿಕ್ಷಣ ಪ್ರಸಾರದಲ್ಲಿ ಗುರುಕುಲಗಳು ಮುಖ್ಯ ಪಾತ್ರವಹಿಸಿ ದ್ದವು. ಮನೆಗಳಲ್ಲಿಯೇ ಶಿಕ್ಷಣ ನೀಡಲಾಗುತ್ತಿತ್ತು. ಇಂತಹ ಗುರುಕುಲಗಳು ದೇವಾಲಯಗಳು, ಮಠಗಳು, ಧಾರ್ಮಿಕ ಹಾಗೂ ನೈತಿಕ ಶಿಕ್ಷಣ ನೀಡುವ ಪಾತ್ರ ವಹಿಸಿದ್ದವು. ಧಾರ್ಮಿಕ ಶ್ರದ್ಧೆಯನ್ನು ಬೆಳೆಸಿ ಅಗ್ರಹಾರಗಳಾಗಿ ವಿದ್ವತ್ ಜನರಿಂದ ಕೂಡಿದ ಶಿಕ್ಷಣ ಕೇಂದ್ರಗಳಾಗಿ 15–16ನೇ ಶತಮಾನದವರೆಗೂ ಗಣನೀಯ ಸೇವೆ ಸಲ್ಲಿಸಿವೆ. ಮಂಡ್ಯ ಜಿಲ್ಲೆಯ ಮದ್ದೂರು ಕೂಡ ವೈಷ್ಣವ ಬ್ರಾಹ್ಮಣರ ಅಗ್ರಹಾರ ವಾಗಿ ವಿಜೃಂಭಿಸುತ್ತಿತ್ತು. ಅದಕ್ಕೆ ನರಸಿಂಹ ಚತುರ್ವೇದಿ ಮಂಗಳಂ ಎಂಬ ಹೆಸ ರಿತ್ತು. ಬಸರಾಳು, ಬೆಳಗೊಳ, ಬೆಳ್ಳೂರು, ಹೊಸಹೊಳಲು, ಮಾರೇನ ಹಳ್ಳಿಗಳು ರಾಜರಿಂದ ನೇಮಕವಾದ ಅಗ್ರಹಾರಗಳಾಗಿದ್ದವು. 18ನೇ ಶತಮಾನದಲ್ಲೂ ಕೂಡ ಮೈಸೂರು ಒಡೆಯರು ಬ್ರಾಹ್ಮಣರಿಗಾಗಿ ಇಂತಹ ಅಗ್ರಹಾರಗಳನ್ನು ಬಿಟ್ಟಿದ್ದರು. ಮೈಸೂರಿನ ದೇವಾಂಗ ಅಗ್ರಹಾರ, ರಾಮಚಂದ್ರ ಅಗ್ರಹಾರ, ಚೆಲುವಾಂಬ ಅಗ್ರ ಹಾರ, ರಾಮಾನುಜ ಅಗ್ರಹಾರಗಳು ಉಲ್ಲೇಖನಾರ್ಹ.

**ಬ್ರಹ್ಮಪುರಿಗಳು :**—ಅಗ್ರಹಾರಗಳಂತೆಯೇ ಶಿಕ್ಷಣ ಕ್ಷೇತ್ರದಲ್ಲಿ ಪ್ರಮುಖ ಸೇವೆ ಸಲ್ಲಿಸುತ್ತಿದ್ದ ಬ್ರಹ್ಮಪುರಿಗಳು ಕರ್ನಾಟಕದಲ್ಲಿ ಮಾತ್ರವಿದ್ದವು. ಅಗ್ರಹಾರಗಳು ಗ್ರಾಮಾಂತರ ಪ್ರದೇಶಗಳಲ್ಲಿದ್ದರೆ, ಬ್ರಹ್ಮಪುರಿಗಳು ನಗರ-ಪಟ್ಟಣಗಳಲ್ಲಿದ್ದವು. ಬ್ರಾಹ್ಮಣ ವಿದ್ವಾಂಸರು ನಗರಗಳಾದ ಬ್ರಹ್ಮಪುರಿಗಳಲ್ಲಿದ್ದು ಪ್ರೌಢಶಾಲಾ ಶಿಕ್ಷಣವನ್ನು ನೀಡುತ್ತಿದ್ದರು. ಹೊಯ್ಸಳರ ವಿಜಯನಗರದರಸರ ಕಾಲದಲ್ಲಿ ಇಂತಹ ಬ್ರಹ್ಮಪುರಿಗಳು ತಲೆ ಎತ್ತಿದವು. ಇಂತಹ ಬ್ರಹ್ಮಪುರಿಗಳನ್ನು ಇಂದಿನ ಪ್ರೌಢಶಾಲೆಗಳಿಗೆ ಹೋಲಿಸಬಹುದು, ಇಲ್ಲಿ ಸಾಕಷ್ಟು ಜ್ಞಾನ ಸಂಪಾದನೆಯಾದ ನಂತರವೇ ಘಟಿಕಾಸ್ಥಾನಗಳಿಗೆ ಸೇರುತ್ತಿದ್ದರು. ಅಗ್ರಹಾರಗಳ ಹಾಗೂ ಬ್ರಹ್ಮಪುರಿಗಳ ಕಾರ್ಯಚಟುವಟಿಕೆ ಒಂದೇ ಆಗಿತ್ತು ತಲಕಾಡು, ಮಾನ್ಯಪುರ, ಬಳ್ಳಿಗಾವಿ, ಇಂಗಳೇಶ್ವರ, ಕೊಲ್ಲಾಪುರ, ಶೃಂಗೇರಿ, ಪುಲಿಗೆರೆ, ಹನಗುಂದ ಮುಖ್ಯವಾದ ನಗರ ಪುರಿಗಳಾಗಿದ್ದವು. ರಾಷ್ಟ್ರಕೂಟ ಅರಸನು 920 ರಲ್ಲಿ ಪುಲಿಗೆರೆಯಲ್ಲಿ ಬ್ರಹ್ಮಪುರಿ ಸ್ಥಾಪಿಸಿದನು. ಚಾಲುಕ್ಯ ಸೇನಾನಿ ಕೇಶವದೇವ ಬಳ್ಳಿಗಾವಿಯಲ್ಲಿ ಬ್ರಹ್ಮಪುರಿ ಸ್ಥಾಪಿಸಿ ದತ್ತಿ ಬಿಟ್ಟಿದ್ದನು. ರಾಣಿ ಅಕ್ಕಾದೇವಿಯು 42 ಮಹಾಜನರನ್ನೊಳಗೊಂಡ ಬ್ರಹ್ಮಪುರಿಯನ್ನು 1053 ರಲ್ಲಿ ವಿಕ್ರಮಪುರಿಯಲ್ಲಿ ಸ್ಥಾಪಿಸಿದಳು. ಮೈಸೂರು ಅರಮನೆಯ ಒಂದು ಬಾಗಿಲಿಗೆ ಬ್ರಹ್ಮಪುರಿ ಎಂದು ಹೆಸರಿದೆ.

**ಘಟಿಕಾ ಸ್ಥಾನಗಳು :**— ಕೆಲವು ಅಗ್ರಹಾರಗಳು ಘಟಿಕಾ ಸ್ಥಾನಗಳಾಗಿದ್ದವು. ಅಗ್ರಹಾರ, ಬ್ರಹ್ಮಪುರಿ ಮಂದಿರಗಳಲ್ಲಿ ಶಿಕ್ಷಣ ಮುಗಿಸಿದವರು, ಹೆಚ್ಚಿನಮಟ್ಟ ಶಿಕ್ಷಣ ಪಡೆಯಲು ಘಟಿಕಾ ಸ್ಥಾನಗಳೆಂಬ ಶ್ರೇಷ್ಠ ಶಿಕ್ಷಣ ಕೇಂದ್ರಗಳಿಗೆ ಸೇರುತ್ತಿದ್ದರು. ಶ್ರೇಷ್ಠ ವಿದ್ವಾಂಸರ ಮಾರ್ಗದರ್ಶನ ಇಂತಹ ಘಟಿಕಾ ಸ್ಥಾನಗಳಲ್ಲಿತ್ತು. ಘಟಿಕಾ ಸ್ಥಾನಗಳ ಮನ್ನಣೆಗೆ ಪಾತ್ರನಾದವನು ವಿದ್ವತ್ತಿನ ಶಿಖರವನ್ನು ಮುಟ್ಟಿದವನಾಗಿರುತ್ತಿದ್ದನು. ಇಂತಹವರನ್ನು ಘಟಿಕಾ ಸಾಹಸಿ ಎಂದು ಕರೆಯುತ್ತಿದ್ದರು, ಇಂತಹ ಕೇಂದ್ರಗಳಲ್ಲಿ ಶಾಸ್ತ್ರ, ಪ್ರಭಾಕರ, ವಾಸ್ತುಶಿಲ್ಪ, ಮೀಮಾಂಸ, ನ್ಯಾಯ, ವೇದಗಳು, ಆಯುರ್ವೇದ, ಧನುರ್ವೇದ, ಮಿಲಿಟರಿ ಶಿಕ್ಷಣ, ರಾಜನೀತಿ, ವಿಜ್ಞಾನ ಮುಂತಾದ ವಿಷಯಗಳ ಬಗ್ಗೆ ಅಧ್ಯಯನವಾಗುತ್ತಿತ್ತು. ಗುಲ್ಬರ್ಗಾ ಜಿಲ್ಲೆಯ ನಾಗಾಯಿ, ಹೂವಿನಬಾಗೆ, ರಾಯಭಾಗ, ಬಳ್ಳಿಗುತ್ತಿ, ತಾಳಗುಂದ, ಕಳಸ, ಬೇಲೂರು, ಸೂಪಿ, ಧಾರವಾಡ ಜಿಲ್ಲೆಯ ಕಾಡಿಯೂರು, ಕೋಟುಮ್ಮಚ್ಚಿಗೆ, ಕುಕನೂರು, ಹೆಂಜೇರು, ಹೊಟ್ಟೂರು, ಬಳ್ಳಾರಿಯ ಮೋರಿಂಗೆರೆ, ಬಿಜಾಪುರದ ಕಡಲೆವಾಡ ಮುಖ್ಯವಾದ ಘಟಿಕಾ ಸ್ಥಾನಗಳಾಗಿದ್ದವು.

ದಕ್ಷಿಣ ಭಾರತದಲ್ಲಿ ಇಂತಹ 64 ಘಟಿಕಾಸ್ಥಾನಗಳಿದ್ದವೆಂದು ಇತಿಹಾಸದ ಪುಟಗಳು ತಿಳಿಸುತ್ತವೆ. ಕಂಚಿಯು ಒಂದು ಮಹಾ ಘಟಿಕಾ ಕೇಂದ್ರವಾಗಿತ್ತು.

ಸಿದ್ಧಗಂಗಾ

ಮಯೂರವರ್ಮ ರಾಜನು ಇಲ್ಲಿಯೇ ಬಂದು ವ್ಯಾಸಂಗ ಮಾಡಿ ತಾಳಗುಂದಕ್ಕೆ ಹೋಗಿದ್ದನು. ಹಿಂದಿನ ಘಟಿಕಾ ಸ್ಥಾನಗಳ ಹಿರಿಮೆ ಇಂದಿನ ಆಕ್ಸ್‌ಫರ್ಡ್, ಕೇಂಬ್ರಿಡ್ಜ್ ವಿದ್ಯಾಲಯಗಳ ಮಟ್ಟದ್ದಾಗಿತ್ತು. ಘಟಿಕಾಗಳ ಪದವೀಧರರನ್ನು ಸ್ನಾತಕ'ನೆಂದು ಕರೆಯುತ್ತಿದ್ದರು. ಕ್ರಾವಿಲ್, ಚಡಗ, ಚಟ್ಟೋಪಾಧ್ಯಾಯ ಘಟಿಕಾ ಸಾಹಸಿ ಎಂಬೆಲ್ಲ ಬಿರುದುಗಳ ಪ್ರಶಸ್ತಿಗಳ ಉಲ್ಲೇಖನಗಳಿವೆ.

ಬೌದ್ಧ ವಿಹಾರಗಳು :—ಕ್ರಿ ಪೂ. ದಲ್ಲಿಯೇ ಬನವಾಸಿಯು ಬೌದ್ಧ ಕ್ಷೇತ್ರ ವಾಗಿತ್ತು. ಇಲ್ಲಿನ ವಿಹಾರಗಳು ೧೦೦ ಅಡಿಗಳಿಗಿಂತ ಹೆಚ್ಚು ಎತ್ತರವಾದುದಾಗಿ ಅಲ್ಲಿ 300 ಜನ ಬೌದ್ಧ ಬಿಕ್ಷುಗಳು ವಾಸಿಸುತ್ತಿದ್ದು, ಧರ್ಮಪ್ರಚಾರ ಶಿಕ್ಷಣದ ಮೂಲಕ ವಾಗುತ್ತಿತ್ತು. ಲಕ್ಕುಂಡಿ, ಡಂಬಳ, ಬಳ್ಳಿಗಾವಿಗಳಲ್ಲಿ ಬೌದ್ಧ ವಿಹಾರಗಳು ಇದ್ದವು. ಇಂತಹ ವಿಹಾರಗಳಲ್ಲಿದ್ದ ವಿದ್ಯಾರ್ಥಿಗಳಿಗೆ ಸಿದ್ಧಿ ವಿಹಾರಕನೆಂದು, ಉಪಾಧ್ಯಾಯರಿಗೆ ಯತಿಗಳೆಂದು ಕರೆಯುತ್ತಿದ್ದರು. ಗುರು ಶಿಷ್ಯರ ಸಂಬಂಧ ತಂದೆ ಮಗನಂತೆ ಇತ್ತು. ಇವರ ಶಿಕ್ಷಣದಲ್ಲಿ ಧಾರ್ಮಿಕ ವಿಷಯಗಳೇ ಅಲ್ಲದೆ, ಐಹಿಕ ಕಲೆಗಳು, ವಿಜ್ಞಾನಗಳನ್ನು ಕಲಿಸುತ್ತಿದ್ದರು.

ಜೈನರ ಚೈತ್ರಾಲಯಗಳು :—ಕರ್ನಾಟಕದಲ್ಲಿ ಜೈನ ಶಿಕ್ಷಣದ ಇತಿಹಾಸ ಕ್ರಿ.ಪೂ. 297 ರಿಂದಲೇ ಪ್ರಾರಂಭವಾಯಿತೆನ್ನಬಹುದು, ಶ್ರವಣ ಬೆಳಗೊಳ ಜೈನರ ವಿದ್ವಾಂಸರ, ಮುನಿಗಳ ಭವ್ಯ ಕೇಂದ್ರವಾಗಿತ್ತು. ಅವರ ಬಸದಿಗಳು, ಚೈತ್ರಾಲಯ ಗಳು ಸಾಂಸ್ಕೃತಿಕ ಕೇಂದ್ರಗಳಾಗಿ ವಿದ್ಯಾಭ್ಯಾಸಗಳ ತಾಣಗಳಾಗಿದ್ದವು. ಕರ್ನಾಟಕ ದಲ್ಲಿ ನಾಡಭಾಷೆ ಬೆಳೆಯಲು ಮೂಲಕಾರಣವಾಗಿ ಸಾಹಿತ್ಯ ಸೃಷ್ಟಿ ಇವರಿಂದಲೇ ಆರಂಭವಾಯಿತು. ಹನಸೋಗೆ, ಮಲೆಯೂರು, ಪುನ್ನಡು, ಬಂಕಾಪುರ, ಕೊಪ್ಪಳ, ಲಕ್ಕುಂದಿ, ಕುಪ್ಪತ್ತೂರು, ಹುಲಿಗೆರೆ, ರಾಯದುರ್ಗ, ಬನವಾಸೆ, ಗೇರುಸೊಪ್ಪ, ಕೋಗಳಿ, ಬೆಳಗಾಂ, ಹುಂಚ, ಮೂಡಬಿದರೆ, ಕುಂದಾದ್ರಿ, ರೇಡಂ, ಕೋತಳಿ, ಹಾಡುವಳ್ಳಿ, ಭಟಕಲ್, ಬಾದಾಮಿ ಮೊದಲಾದ ಕಡೆಗಳಲ್ಲಿ ಬಸದಿಗಳು, ಚೈತ್ರಾ ಲಯಗಳು ಶಿಕ್ಷಣ ಚಟುವಟಿಕೆಗಳನ್ನು ನಡೆಸುತ್ತಿದ್ದವು. ಸಂಗೀತಪುರ ಲಲಿತಕಲೆಗಳಿಗೆ ಪ್ರಸಿದ್ಧಿಪಡೆದಿತ್ತು. ಹೀಗೆ ಕರ್ನಾಟಕದಲ್ಲಿ ಬೌದ್ಧ ವಿಹಾರಗಳು, ಜಿನಾಲಯಗಳು ಮೂಲತಃ ಮತಪ್ರಚಾರಕ್ಕೆ ಶಿಷ್ಯರನ್ನು ತಯಾರುಮಾಡುವ ಸಾಂಸ್ಕೃತಿಕ ಕೇಂದ್ರ ಗಳಾಗಿ, ವಿದ್ಯೆಯ ಪ್ರಸಾರಕ್ಕೆ ಕಾರಣೀಭೂತವಾದವು.

ಮಠಮಂದಿರಗಳು :—ಕರ್ನಾಟಕದಲ್ಲಿರುವ ಮಠಗಳು ಹಾಗೂ ದೇವಾಲಯ ಗಳು ಧಾರ್ಮಿಕ ಚಟುವಟಿಕೆಗಳ ಕ್ಷೇತ್ರಗಳಾಗಿರುವುದರ ಜೊತೆಗೆ ಶಿಕ್ಷಣ ಪ್ರಸಾರ ಕಾರ್ಯಕ್ಕೆ ಮೀಸಲಾಗಿದ್ದವು. ಶೈವಾಚಾರ್ಯರು ತಮ್ಮ ತಪೋಭಿವೃದ್ಧಿ ಮಾಡಿಕೊಳ್ಳುವು

14ನೇ ಶತಮಾನದಲ್ಲಿ ಬಹಮನಿ ಸುಲ್ತಾನರ ಕಾಲದಲ್ಲಿ ಮುಕ್ತಾಬ್‌ಗಳಲ್ಲಿ ಪ್ರಾಥಮಿಕ ಶಿಕ್ಷಣವು, ಮದ್ರಸಗಳಲ್ಲಿ ಪ್ರೌಢಶಿಕ್ಷಣವು ನಡೆಯುತ್ತಿತ್ತು. ಮಹಮದ್ ಗವಾನನು ಬಿದರೆಯ ಸುಲ್ತಾನರಲ್ಲಿ ಮಂತ್ರಿಯಾಗಿ, ಶಿಕ್ಷಣತಜ್ಞನಾದುದರಿಂದ ತನ್ನ ಹೆಸರಿನಲ್ಲಿ "ಮಹಮದ್ ಗವಾನ್" ಕಾಲೇಜನ್ನು 1472ರಲ್ಲಿ ಬೀದರ್ ನಗರದಲ್ಲಿ ಸ್ಥಾಪಿಸಿದನು ಅಂದು ಅದು ಮಹಮದೀಯರ ವಿಶ್ವವಿದ್ಯಾಲಯವೇ ಆಗಿತ್ತು. ಆ ಕಾಲೇಜು ಮೂರು ಮಹಡಿಗಳುಳ್ಳ ವಿಶಾಲವಾದ ಕೊಠಡಿಗಳು. ಸುಸಜ್ಜಿತವಾದ ಪೀಠೋಪಕರಣಗಳಿಂದ ಕೂಡಿತ್ತು ಪರ್ಷಿಯಾ, ಇರಾಖ್, ಆಫ್ಘಾನಿಸ್ತಾನಗಳಿಂದ ವಿದ್ವಾಂಸರು ಹಾಗೂ ವಿದ್ಯಾರ್ಥಿಗಳು ವ್ಯಾಸಂಗಕ್ಕಾಗಿ ಇಲ್ಲಿಗೆ ಬರುತ್ತಿದ್ದರು. ಪ್ರಾಥಮಿಕ ಹಾಗೂ ಮಾಧ್ಯಮಿಕ ಶಾಲೆಗಳಿಗೆ ಮಸೀದಿಗಳೇ ಕೇಂದ್ರಗಳಾಗಿವೆ ಕರ್ನಾಟಕದಲ್ಲಿ ಅನೇಕ ಮಹಮದೀಯರ ಸಂಘ ಸಂಸ್ಥೆಗಳು ಅನೇಕ ಶಾಲಾಕಾಲೇಜುಗಳನ್ನು ಪ್ರಾರಂಭಿಸಿವೆ.

ಆಧುನಿಕ ಶಿಕ್ಷಣ ಕ್ಷೇತ್ರದಲ್ಲಿ ಕ್ರೈಸ್ತ ಮಿಷನರಿಗಳು ಎಲ್ಲಾ ಕಡೆ ಶಾಲಾಕಾಲೇಜುಗಳನ್ನು ತೆರೆದು ಮಹತ್ತರ ಸೇವೆ ಸಲ್ಲಿಸುತ್ತಿವೆ ಪ್ರಾಚೀನ ಕರ್ನಾಟಕದಲ್ಲಿ ಸಂಸ್ಕೃತ ಪ್ರಧಾನವಾದ ಮಾಧ್ಯಮವಾಗಿತ್ತು. ವೈದಿಕರ ಸ್ವತ್ತಾಗಿತ್ತು ಇಂದು ಕಾನ್ವೆಂಟ್ ಶಾಲೆಗಳು ಬೆಳೆದು ಇಂಗ್ಲೀಷ್ ಭಾಷೆ ಮಾಧ್ಯಮವಾಗಿ ಹರಡಿದೆ. 1910 ರಲ್ಲಿ ವಯಸ್ಕರ ಶಿಕ್ಷಣ ಸಂಸ್ಥೆ ಪ್ರಾರಂಭವಾಗಿ, ರಾಜ್ಯ ವಯಸ್ಕರ ಶಿಕ್ಷಣ ಸಂಸ್ಥೆ ಗ್ರಾಮೀಣ ಪ್ರದೇಶಗಳಲ್ಲಿ ಶಿಕ್ಷಣ ಪ್ರಸಾರ ಕಾರ್ಯಗಳಲ್ಲಿ ಮಹತ್ತರ ಪಾತ್ರ ವಹಿಸುತ್ತಿವೆ.

ಆಧಾರ ಗ್ರಂಥಗಳು

೧ ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಡಾ| ಚಿದಾನಂದ ಮೂರ್ತಿ.
೨. ಕರ್ನಾಟಕ ಸಂಸ್ಕೃತಿ ಸಮೀಕ್ಷೆ ಡಾ| ಹೆಚ್. ತಿಪ್ಪೇರುದ್ರಸ್ವಾಮಿ.
೩. ಶಿಕ್ಷಣ ಕ್ಷೇತ್ರದಲ್ಲಿ ಖಾಸಗಿ ಸಂಸ್ಥೆಗಳು. ಕೆ ಎಸ್. ಸದಾಶಿವಯ್ಯ.
೪. ಕರ್ನಾಟಕದಲ್ಲಿ ಶಿಕ್ಷಣ. ಎಸ್.ಎ. ಜೆವೂರ್.

## ೩. ಶಿವಗಂಗೆ :-

ಪಂ। ಕೆ. ಪಿ. ಶಿವಲಿಂಗಯ್ಯ ಎಂ.ಎ., ಬಿ.ಇಡಿ.,
ಪ್ರಿನ್ಸಿಪಾಲ್, ಗಾ॥ ಜೂನಿಯರ್ ಕಾಲೇಜ್(ಬಾಯ್ಸ್)
18ನೆಯ ಕ್ರಾಸ್, ಮಲ್ಲೇಶ್ವರಂ. ಬೆಂಗಳೂರು-3.

'ದಕ್ಷಿಣಕಾಶಿ' ಎಂದು ಪ್ರಸಿದ್ಧವಾಗಿರುವ ಈ ಕ್ಷೇತ್ರವು ಬೆಂಗಳೂರಿಗೆ 34 ಮೈಲಿಗಳ ದೂರದಲ್ಲಿದೆ. ನೆಲಮಂಗಲ ತಾಲ್ಲೂಕಿಗೆ ಸೇರಿರುತ್ತದೆ. ಯುಗಯುಗ ಳಿಂದಲೂ ಪ್ರಸಿದ್ಧಿ ಪಡೆದಿದೆಯೆಂದು ಈ ಪ್ರಾಂತದಲ್ಲಿ ಹೇಳಿಕೆಯುಂಟು. ಸೃಷ್ಟಿಯ ಆದಿಯಲ್ಲಿ ಧರ್ಮಪುರುಷನೂ ದ್ವಿತೀಯ ಶಂಭುವೆಂದು ಪ್ರಖ್ಯಾತನಾದವನೂ ಆದ ನಂದೀಶ್ವರನು ತನ್ನ ಕುತ್ತಿಗೆಯ ಮೇಲೆ ಈ ಪರ್ವತವನ್ನಿರಿಸಿಕೊಂಡು ಶಿವನನ್ನು ಕುರಿತು ತಪಸ್ಸು ಮಾಡಿದ್ದರಿಂದ ಇದಕ್ಕೆ 'ಕಕುದ್ಗಿರಿ' ಎಂದು ಹೆಸರಾಯಿತಂತೆ! ಬೆಂಗಳೂರಿನಿಂದ ದಾಬಸ್‌ಪೇಟೆ (ಹಿಂದಿನ ಸೋಂಪುರ) ವರೆಗೆ ರೈಲಿನಲ್ಲಾಗಲಿ, ಬಸ್‌ನಲ್ಲಾಗಲಿ ಪ್ರಯಾಣ ಮಾಡಿ, ಅಲ್ಲಿಂದ 3 ಮೈಲಿ ದೂರವನ್ನು ಕ್ರಮಿಸಬೇಕು. ಬಸ್ಸುಗಳೂ ಇವೆ. ಈ ಬೆಟ್ಟವು ಸಮುದ್ರ ಮಟ್ಟದಿಂದ 4559 ಅಡಿಗಳಷ್ಟು ಎತ್ತರವಾಗಿದೆ. ಪ್ರಕೃತಿ ಸೌಂದರ್ಯದಿಂದ ಕೂಡಿದ ಈ ಸ್ಥಳವು ಐತಿಹಾಸಿಕ ಪ್ರಸಿದ್ಧಿಯನ್ನು ಹೊಂದಿದೆ.

ಕ್ರಿ.ಶ. 8ನೆಯ ಶತಮಾನದಲ್ಲಿ ಅದೇ ನೆಲಮಂಗಲ ತಾಲ್ಲೂಕಿನಲ್ಲಿರುವ ಮಣ್ಣೆ (ಆಗಿನ ಮಾನ್ಯಪುರ) ಯಲ್ಲಿ ರಾಜ್ಯವಾಳುತ್ತಿದ್ದ ಗಂಗರಾಜರಿಗೆ ಸೇರಿದ್ದ ಈ ಸ್ಥಳವು ಅನಂತರದಲ್ಲಿ ಚೋಳರ ಆಡಳಿತಕ್ಕೆ ಒಳಪಟ್ಟಿದ್ದಿತು. 12ನೆಯ ಶತಮಾನದಲ್ಲಿ ಹೊಯ್ಸಳರಿಗೆ ಒಳಪಟ್ಟಿದ್ದಿತು. ವಿಷ್ಣುವರ್ಧನ ರಾಜನ ಪಟ್ಟದರಸಿಯಾಗಿದ್ದ ಶಾಂತಲೆಯು ತನ್ನ ಅಂತಿಮ ಕಾಲವನ್ನು ಈ ಕ್ಷೇತ್ರದಲ್ಲಿಯೇ ಕಳೆದು ಇಲ್ಲಿಯೇ ಮೃತಳಾದಳು. ಆದರ ಸ್ಮಾರಕವಾಗಿ ಬೆಟ್ಟವನ್ನು ಹತ್ತುವೆಡೆಯೇ ಶಾಂತೇಶ್ವರ ದೇವಾಲಯವಿದೆ.

ವೀರಶೈವ ಧರ್ಮವು ಆ ಕಾಲದಿಂದಲೂ ಇಲ್ಲಿ ಪ್ರವರ್ಧಮಾನದಲ್ಲಿತ್ತೆಂಬುದಕ್ಕೆ ಇಂದಿಗೂ ಇಲ್ಲಿರುವ ಮೇಲಣಗವಿಮಠ, ಹೊನ್ನಮ್ಮಗವಿಮಠ, ಕಂಬಾಳು ಮಠಗಳು ಸಿದ್ಧೇಶ್ವರ ಮಠ ಮುಂತಾದುವುಗಳೇ ಸಾಕ್ಷಿ.

ಈ ಬೆಟ್ಟವು ಪೂರ್ವ ದಿಕ್ಕಿನಿಂದ ನೋಡಿದರೆ ವೃಷಭಾಕಾರವಾಗಿಯೂ, ಪಶ್ಚಿಮ ದಿಕ್ಕಿನಿಂದ ಗಣೇಶ ಹಾಗೂ ಸಿಂಹಾಕಾರವಾಗಿಯೂ, ದಕ್ಷಿಣ ದಿಕ್ಕಿನಿಂದ ಲಿಂಗಾಕಾರವಾಗಿಯೂ ಕಾಣಿಸುತ್ತದೆ.

ಬೆಟ್ಟದ ಉತ್ತರಭಾಗದಲ್ಲಿ ಗಂಗಾಧರೇಶ್ವರ, ಹೊನ್ನಾದೇವಿ ಗುಡಿಗಳಿವೆ. ಇವು ಸ್ವಾಭಾವಿಕವಾದ ಗುಹಾಂತರ ದೇವಾಲಯಗಳಾಗಿವೆ. ಕೆಂಪೇಗೌಡನು ಕಟ್ಟಿಸಿದನೆಂದು ಹೇಳುವ ಕೆಂಪೇಗೌಡನ ಹಜಾರ ಮುಂತಾದ ಕಟ್ಟಡಗಳಿವೆ. ಬೆಟ್ಟಕ್ಕೆ ಹತ್ತಲು ತಪ್ಪಲಿನಿಂದ ಕುಂಭಿಯವರೆಗೂ ಮೆಟ್ಟಲುಗಳಿವೆ. ಪವಿತ್ರವಾದ ಅಷ್ಟ (8) ತೀರ್ಥಗಳಿವೆ. ಅವುಗಳಲ್ಲಿ 'ಪಾತಾಳಗಂಗೆ' ಮುಖ್ಯವಾದುದು. ಮೆಟ್ಟಲುಗಳನ್ನು ಹತ್ತಲು ಪ್ರಾರಂಭಿಸಿದೊಡನೆ ಎಡಗಡೆ ಬಂಡೆಯಲ್ಲಿ ಕೊರೆದ ದೊಡ್ಡಗಣಪತಿಯೂ ಬಲಗಡೆ ವೀರಭದ್ರ ದೇವಾಲಯವೂ ಇವೆ. ಇನ್ನೂ ಮೇಲೆ ಹೋದರೆ ಸುಂದರವಾದ ಸುಬ್ರಹ್ಮಣ್ಯೇಶ್ವರ ಮೂರ್ತಿಯಿರುವ ದೇವಾಲಯವಿದೆ. ಹೊನ್ನಾದೇವಿ ಮತ್ತು ಗಂಗಾಧರೇಶ್ವರ ದೇವಸ್ಥಾನಗಳ ಪಶ್ಚಿಮದಲ್ಲಿ 'ಪಾತಾಳಗಂಗೆ' ಇದೆ. ಈ ಜಲಾಶಯಕ್ಕೂ ಮಾಗಡಿ ತಾಲ್ಲೂಕು ಕುದೂರು ಗ್ರಾಮದಲ್ಲಿರುವ 'ಅಂತರಗಂಗೆ' ಗೂ ಸಂಬಂಧವಿದೆಯೆಂದು ಹೇಳುತ್ತಾರೆ. ಇಲ್ಲಿ ತೇಲಿಬಿಟ್ಟ ತೊಟ್ಟಿಲು ಅಲ್ಲಿ ಕಾಣಿಸಿತಂತೆ!

ಇದನ್ನು ಪ್ರದಕ್ಷಿಣೆ ಮಾಡಿದವರಿಗೆ ಇಷ್ಟಾರ್ಥ ಸಿದ್ಧಿಸುವುದೆಂಬ ನಂಬುಗೆ ಇದೆ. (ಈ ಲೇಖಕನೂ 1946 ಹಾಗೂ 1958ರಲ್ಲಿ ಎರಡು ಬಾರಿ ಪ್ರದಕ್ಷಿಣೆ ಮಾಡಿದ್ದುಂಟು) ಇದಕ್ಕೆ ಸುತ್ತುವ ಬಸವಣ್ಣ ಎಂದೂ ಕರೆಯುವುದುಂಟು. ಇದರ ಪಶ್ಚಿಮದಲ್ಲಿ ಚಾಚಿಕೊಂಡಿರುವ ದೊಡ್ಡ ಬಂಡೆಯ ಮೇಲೆ ಎರಡು ಕಂಬಗಳಿವೆ. ಒಂದನ್ನು ತೀರ್ಥದ ಕಂಬವೆಂದೂ, ಇನ್ನೊಂದನ್ನು ದೀಪದ ಕಂಬವೆಂದೂ ಕರೆಯುತ್ತಾರೆ. ತೀರ್ಥದ ಕಂಬದ ಬುಡದಲ್ಲಿ ಮಕರ ಸಂಕ್ರಾಂತಿಯಂದು (ಸಾಮಾನ್ಯವಾಗಿ ಪ್ರತಿ ವರ್ಷದ ಜನವರಿ 14ನೆಯ ತಾರೀಖು) ಬೆಳಗಿನ ಝಾವ ತೀರ್ಥ ಉದ್ಭವವಾಗುವುದೆಂದೂ; ಅದನ್ನು ಶೇಖರಿಸಿ ತಂದು ಗಂಗಾಧರೇಶ್ವರನಿಗೆ ಅಭಿಷೇಕ ಮಾಡುವರೆಂದೂ ನಾವು ಚಿಕ್ಕಂದಿನಿಂದ ಕೇಳಿರುತ್ತೇವೆ ಈ ತೀರ್ಥದ ಸ್ವಲ್ಪ ಭಾಗವನ್ನು ಹಿಂದೆ ಮೈಸೂರು ಮಹಾರಾಜರಿಗೂ ಕಳುಹಿಸುತ್ತಿದ್ದರಂತೆ! ಇಲ್ಲಿ ಒಂದು ವೀರಭದ್ರ ದೇವಾಲಯ, ಒಂದು ಶಿವಾಲಯ ಇವೆ ಬೆಟ್ಟದ ಈ ತುದಿಯನ್ನು 'ಕುಂಭಿ' ಎಂದು ಕರೆಯುವ ವಾಡಿಕೆಯುಂಟು. ಇಲ್ಲಿ ನಿಂತು ನೋಡಿದರೆ ಸುತ್ತಣ ದೂರದ ದೃಶ್ಯ ಮನೋಹರವಾಗಿ ಕಾಣುತ್ತದೆ. ದಕ್ಷಿಣದಲ್ಲಿ ಮಾಗಡಿ ಸಾವನ ದುರ್ಗಗಳೂ ನೈರುತ್ಯದಲ್ಲಿ ಭೈರವನ ದುರ್ಗವೂ (ಆದಿ ಚುಂಚನಗಿರಿ) ವಾಯುವ್ಯದಲ್ಲಿ ತುಮಕೂರು ದೇವರಾಯನದುರ್ಗಗಳೂ ಆಗ್ನೇಯದಲ್ಲಿ ಬೆಂಗಳೂರು ನಗರವೂ ಕಾಣುತ್ತವೆ.

ಬೆಟ್ಟದ ತಪ್ಪಲಲ್ಲಿ ಒಂದೇ ಒಂದು ಬೀದಿಯಿರುವ 'ಶಿವಗಂಗೆ' ಗ್ರಾಮವಿದೆ. ಈ ಕ್ಷೇತ್ರದಲ್ಲಿ ಹಿಂದೆ ಅರುವತ್ತನಾಲ್ಕು ವೀರಶೈವ ಮಠಗಳಿದ್ದುವಂತೆ ಈಗ ಮೇಲೆ

ಹೇಳಿರುವ ಎರಡು ಮಠಗಳೂ, ಪಕ್ಕದ ಕಂಬಾಳು ಗ್ರಾಮದಲ್ಲಿ ಒಂದು ಮಠವೂ ಇರುತ್ತವೆ.

ಈ ಊರಿನಲ್ಲಿ ಸ್ಮಾರ್ತ ಸಂಪ್ರದಾಯದ ಒಂದು ಬ್ರಾಹ್ಮಣ ಮಠವಿದೆ. ಇದರ ಮೂಲ ಮಠವನ್ನು ಕ್ರಿ.ಶ 1737ರಲ್ಲಿ ರಥದ ಬೀದಿಯಲ್ಲಿ ಶೃಂಗೇರಿಯ ಶಂಕರ ಭಾರತಿ ಸ್ವಾಮಿಗಳು ಕಟ್ಟಿಸಿದರೆಂದೂ, ಅದು ಶಿಥಿಲವಾಗಲು ಹೊಸ ಮಠವನ್ನು ಅದೇ ಶೃಂಗೇರಿಯ ಸಚ್ಚಿದಾನಂದ ಭಾರತಿ ಸ್ವಾಮಿಗಳು ಊರಿನ ಉತ್ತರ ದಿಕ್ಕಿನಲ್ಲಿ ಈಗ ಇರುವ ಸ್ಥಳದಲ್ಲಿ ಕಟ್ಟಿಸಿ ಅದರಲ್ಲಿ ಕ್ರಿ. ಶ. 1910ರಲ್ಲಿ ಅಮೃತಶಿಲೆಯ ಶ್ರೀ ಶಾರದಾ ವಿಗ್ರಹವನ್ನು ಪ್ರತಿಷ್ಠಿಸಿದರೆಂದೂ ತಿಳಿದು ಬರುತ್ತದೆ. ಎರಡು ಅಡಿ ಎತ್ತರವಿರುವ ಈ ವಿಗ್ರಹವು ಬಹು ಸುಂದರವಾಗಿದೆ. ಹಳೆಯ ಮಠದಲ್ಲಿ ಅಗಸ್ತ್ಯ ತೀರ್ಥವೆಂಬ ಕಲ್ಯಾಣಿ ಇದೆ. ಈ ಕಲ್ಯಾಣಿಯ ಸುತ್ತ ೧೦೮ ಲಿಂಗಗಳಿರುವುದರಿಂದ ಇದನ್ನು ನೂರೆಂಟು ಲಿಂಗದ ಕಲ್ಯಾಣಿಯೆಂದೇ ಜನರು ಕರೆಯುತ್ತಾರೆ. ಶಾರದಾ ಮಠಕ್ಕೂ ಬೆಟ್ಟಕ್ಕೂ ಮಧ್ಯೆ 60×50 ಗಜಗಳ ಅಳತೆಯ ಕಮಲ ತೀರ್ಥವೆಂಬ ಕಲ್ಯಾಣಿಯಿದೆ.

ಈ ಕ್ಷೇತ್ರದಲ್ಲಿ ಮಕರ ಸಂಕ್ರಾಂತಿಯಲ್ಲಿ ಗಿರಿಜಾ ಕಲ್ಯಾಣೋತ್ಸವ ಗಂಗಾಧರೇಶ್ವರ ರಥೋತ್ಸವಗಳೂ ಚೈತ್ರ ಬಹುಳದಲ್ಲಿ ಹೊನ್ನಾದೇವಿಯ ರಥೋತ್ಸವವೂ ವೈಭವದಿಂದ ನಡೆಯುತ್ತವೆ. ಅಂತೂ ಇದೊಂದು ಪುರಾತನ ಪುಣ್ಯ ಕ್ಷೇತ್ರ.

ಗಂಗಾಧರೇಶ್ವರ ದೇವಸ್ಥಾನದಲ್ಲಿ ಕೆಂಪೇಗೌಡ ಮತ್ತು ಅವನ ತಮ್ಮಂದಿರೆಂದು ಹೇಳಲಾದ ಊಳಿಗದ ಬಸವಯ್ಯ ಮತ್ತು ಕೆಂಪಸೋಮಣ್ಣ ಇವರ ಪಂಚಲೋಹದ ಪ್ರತಿಮೆಗಳಿವೆ. ನವರಂಗದ ಮುಂಭಾಗದಲ್ಲಿ ನಂದಿ ಮಂಟಪವೂ ಕಲ್ಯಾಣ ಮಂಟಪವೂ ದೊಡ್ಡ ಹಜಾರವೂ ಇವೆ. ಈ ಹಜಾರದಲ್ಲಿ ನಾಲ್ಕು ದೊಡ್ಡ ಘಂಟೆಗಳಿದ್ದು ಅವುಗಳಲ್ಲಿ ಒಂದು ಕೆಂಪೇಗೌಡನು ದಾನ ಮಾಡಿದ್ದೆಂದು ಹೇಳುವ ಓಂಕಾರ ಘಂಟೆಯಿದೆ. ಗೋಡೆಯ ಮೇಲೆ ಗಿರಿಜಾ ಕಲ್ಯಾಣವು ಸುಂದರವಾಗಿ ಕೆತ್ತಲ್ಪಟ್ಟಿದೆ. ಗಂಗಾಧರೇಶ್ವರ ದೇವಾಲಯದ ಹಿಂಭಾಗದಲ್ಲಿರುವ ಹೊನ್ನಾದೇವಿ ಗುಡಿಯಲ್ಲಿ 5 ಅಡಿ ಎತ್ತರದ ದೇವಿಯ ವಿಗ್ರಹವಿದೆ. ಎಂಟು ಕೈಗಳನ್ನು ಹೊಂದಿರುವ ಈ ಮೂರ್ತಿಯು ಚಂಡ ಮತ್ತು ಮುಂಡ ಎಂಬ ರಾಕ್ಷಸರನ್ನು ಮೆಟ್ಟಿ ಕುಳಿತಿರುವ ಭಂಗಿಯಲ್ಲಿ ರೌದ್ರಾಕಾರವಾಗಿದೆ. ಸಂಸ್ಕೃತದಲ್ಲಿ ಈ ದೇವಿಯ ಹೆಸರು 'ಸ್ವರ್ಣಾಂಬಾ' ಎಂದು ಇದೆ.

ಈ ದೇವಾಲಯಗಳಿಂದ ಮುಂದೆ ಹೋದರೆ ಎಮ್ಮೆ ಬಸವನ ವಿಗ್ರಹವೂ, ಗಂಜಿ ವೀರಭದ್ರನ ದೇವಾಲಯವೂ ಇವೆ. ಹಿಂದೆ ಗಂಗಾಧರೇಶ್ವರ ದೇವಾಲಯದಲ್ಲಿ ಸತತ ಅನ್ನ ದಾಸೋಹ ನಡೆಯುತ್ತಿದ್ದು ಅನ್ನ ಬಸಿದ ಗಂಜಿಯು ವೀರಭದ್ರ ದೇವಸ್ಥಾನದ

ಪಕ್ಕದಲ್ಲೇ ಹರಿಯುತ್ತಿದ್ದುದರಿಂದ ಈ ಹೆಸರು ಬಂದಿದೆಯೆಂದು ತಿಳಿದುಬರುತ್ತದೆ. ಇಲ್ಲಿಯೇ ಸಮೀಪದಲ್ಲಿ ಕೆಂಪೇಗೌಡನ ಹಜಾರವಿದೆ. ಇಲ್ಲಿ ಆತನು ದರ್ಬಾರು ನಡೆಸುತ್ತಿದ್ದನಂತೆ. ಮುಂದೆ ಹೋದರೆ ಗಾರೆ ಬಸವಣ್ಣನ ದ್ವಾರವೂ, ಐದು ಭಕ್ತ ವಿಗ್ರಹಗಳಿರುವ ಒಂದು ಗವಿಯೂ ಸಿಕ್ಕುತ್ತವೆ.

ಇಲ್ಲಿಂದ ಎಡಕ್ಕೆ (ಪೂರ್ವ ದಿಕ್ಕಿಗೆ) ತಿರುಗಿದರೆ ಮೇಲಣಗವಿ ಮಠ ಸಿಕ್ಕುತ್ತದೆ. ಇಲ್ಲಿಯೇ ಪ್ರಸಿದ್ಧ ಕವಿಯಾದ ಗುಬ್ಬಿ ಮಲ್ಲಣಾರ್ಯನು ಕ್ರಿ ಶ 1530 ರಲ್ಲಿ ವೀರಶೈವಾಮೃತ ಪುರಾಣವನ್ನು ರಚಿಸಿದನೆಂದೂ, ಆತನು ಈ ಮಠದ ಶಾಂತನಂಜೇಶ್ವರ ಗುರುವಿನ ಶಿಷ್ಯನೆಂದೂ ಗೊತ್ತಾಗುತ್ತದೆ. ಈ ಮಠದಲ್ಲಿರುವ ಗವಿಯಲ್ಲಿ ರೇವಣಸಿದ್ದೇಶ್ವರರ ಪುತ್ರ ರುದ್ರಮುನಿ ಶಿವಾಚಾರ್ಯರ ವಿಗ್ರಹವಿದೆ. ಈ ಗವಿಯಲ್ಲಿ ಎರಡು ಯೋಗ ಮಂಟಪಗಳಿವೆ, ಒರಳು (ಒಳಕಲ್) ತೀರ್ಥವೂ, ಕುಂಭಾವತಿ ತೀರ್ಥವೂ ಈ ಮಠದ ಬಳಿ ಇವೆ

ಗಾರೆ ಬಸವಣ್ಣನ ದ್ವಾರವನ್ನು ದಾಟಿ ಮುಂದೆ ಎರಡು ಬಂಡೆಗಳ ಮಧ್ಯದ ಸ್ವರ್ಗದ್ವಾರವನ್ನು (ಒನಕೆ ಕಿಂಡಿ) ಕ್ರಮಿಸಿದರೆ ಕಡಿದಾದ ಬಂಡೆ ಸಿಕ್ಕುವುದು. ಇದನ್ನು ತೊಡೆ ನಡುಗುವ ಬಂಡೇಯೆಂದೂ ಕರೆಯುತ್ತಾರೆ. ಇಲ್ಲಿಂದ ಮೇಲೆ ಹೋದರೆ ಕೋಡುಗಲ್ಲು ಬಸವ ಸಿಕ್ಕುತ್ತದೆ. ಇದನ್ನು 'ಕುಂಭಿ ಬಸವಣ್ಣ' ಎಂದೂ ಹೇಳುತ್ತಾರೆ. ಇದನ್ನು ಕ್ರಿ ಶ. 1388 ರಲ್ಲಿ ಕೆತ್ತಲಾಗಿದೆಯೆಂದು ತಿಳಿದುಬರುತ್ತದೆ. ಇದು ಕಡಿದಾದ ಬಂಡೆಯ ತುದಿಯಲ್ಲಿದೆ. ಇದರ ಸುತ್ತ ಕಂಬಿ ಹಾಕಿದ್ದಾರೆ.

## 16 ಭಕ್ತೆ ಕರಿಕಾಲಮ್ಮ

—ರುದ್ರಪಶುಪತಿ

ಚೋಳ ದೇಶದಲ್ಲಿ ಕರಿಕಾಲ ಪುರವೆಂಬ ಊರು, ಅಲ್ಲಿ ಮಾಣಿಕ್ಯ ಶೆಟ್ಟಿ ಎಂಬ ಒಬ್ಬ ವ್ಯಾಪಾರಿ, ಆತನಿಗೆ ಕರಿಕಾಲಮ್ಮ ಎಂಬಾಕೆ ಪತ್ನಿ. ಕರಿಕಾಲಮ್ಮ ಶಿವನಿಗೆ ಮಹಾಭಕ್ತಳು. ಆದರೆ ಆಕೆಯದು ಗುಪ್ತ ಭಕ್ತಿ, ಮಾನಸಿಕ ಪೂಜೆ. ಪ್ರಕಟವಾಗಿ ಪೂಜಿಸಲು, ಬಹಿರಂಗ ಭಕ್ತಿ ತೋರಲು ಆಕೆಗೆ ಪತಿಯ ಹಾಗೂ ಅತ್ತೆ ಮಾವಂದಿರ ಭಯವಿತ್ತು.

ಬೆಳಗ್ಗೆ ಎದ್ದಾಗಿಲಿಂದಲು ಮನದಲ್ಲೆ ಶಿವನಾಮ ಪಠಿಸುವಳು, ತಾನು ಸ್ನಾನ ಮಾಡುವ ಮೊದಲು ಆ ನಿರ್ಮಲೋದಕ ಶಿವನ ಅಭಿಷೇಕಕ್ಕೆಂದು ತನ್ನ ಮನದಲ್ಲೆ ಹರನಿಗೆ ಮಜ್ಜನ ಮಾಡುವಳು. ತಾನು ಮುಡಿವ ಕಂಪಿನ ಹೂಗಳನ್ನೆ ಮುಡಿವ ಮೊದಲು ಹರನ ಲಿಂಗಕ್ಕೆ ಅರ್ಪಿಸುವಳು. ತಾನು ಹೂವಿನ ಪರಿಮಳದ ಕಂಪು ಅನುಭವಿಸುವಾಗ ಹರನಿಗೆ ಅದು ಅರ್ಪಿತವೆಂಬುವಳು.

ಅಡಿಗೆ ಮಾಡುವಾಗ ಶಿವನಾಮ...ಮಾಡುವ ಕೆಲಸವೆಲ್ಲಾ ಶಿವಪೂಜೆ....ಇಟ್ಟ ಒಂದೊಂದು ಹೆಜ್ಜೆಯು ಕೈಲಾಸದೆಡೆಗೆ...ಎಂಬ ಭಾವನೆ ಅವಳದು. ತಾನು ಉಂಡದ್ದು ಉಟ್ಟದ್ದು ಶಿವಾರ್ಪಿತವೆಂಬಳು. ಈ ಭವಸಾಗರದಿಂದ ಮುಕ್ತಳನ್ನಾಗಿ ಮಾಡಿ ನಿನ್ನೆಡೆಗೆ ಕರೆದುಕೊ ಎಂದು ಶಿವನನ್ನು ಬೇಡುವಳು.

ಹೀಗೆಯೆ ಕಾಲ ಉರುಳಿತು, ತನ್ನ ಭಕ್ತಳ ಗುಪ್ತ ಭಕ್ತಿಯನ್ನು ಪ್ರಕಟಪಡಿಸಬೇಕೆಂದು ಶಿವಾ ಒಂದು ಲೀಲೆ ತೋರಿದ. ಒಬ್ಬ ಸಾಧುವಿನ ವೇಷದಲ್ಲಿ ಮಾಣಿಕ್ಯ ಶೆಟ್ಟಿಯ ಬಳಿ ಬಂದು ಎರಡು ರಸಭರಿತ ಮಾವಿನ ಹಣ್ಣನ್ನು ಕೊಡುತ್ತಾನೆ. ಆಗ ಮಾವಿನ ಕಾಲವೆ ಅಲ್ಲ, ಶೆಟ್ಟಿ ಆ ಕಾಲದ ಆ ಫಲವನ್ನು ನೋಡಿ ಅಚ್ಚರಿ ಸೂಸಿ ಅಪರೂಪದ ಆ ಹಣ್ಣನ್ನು ತನ್ನ ಮಡದಿಯ ಕೈಗೆ ಕೊಡುತ್ತಾನೆ ಕರಿಕಾಲಮ್ಮ ಆ ರಸಭರಿತ ಕಂಪುಸೂಸುವ ಮಾವನ್ನು ನೋಡಿ...."ಆಹಾ! ಎಂಥಾ ರಸಭರಿತ ಫಲವಿದು! ಇದು ಹರನಿಗೆ ಯೋಗ್ಯವಲ್ಲದೆ ನರರಿಗೆ ಯೋಗ್ಯವಲ್ಲ" ಎಂದು ಮನದಲ್ಲೆ ಹರನಿಗೆ ನೈವೇದ್ಯ ಮಾಡುತ್ತಾಳೆ. ಆದರೆ ಈ ಭಾರಿ ಶಿವ ಮಾನಸಿಕ ನೈವೇದ್ಯ ಸ್ವೀಕರಿಸಿ

ತೃಪ್ತನಾಗಲಿಲ್ಲ. ಜಂಗಮನ ವೇಷ ಧರಿಸಿ ಅಮ್ಮೆಯ ಒಳ ಬಂದ, "ಅಮ್ಮ ಭವಿಗಳ ಮನೆಯ ಅನ್ನ ಸ್ವೀಕರಿಸಲಾರೆ, ಪಡಿ ಕೊಟ್ಟರೆ ಹೋಗಿ ಪಾಕ ಮಾಡಿಕೊಳ್ಳಲಾರೆ. ಮೃದುವಾದ ಫಲಗಳಿದ್ದರೆ ಕೊಡಿ, ತಿಂದು ತೃಪ್ತನಾಗಿ ಶಿವಾರ್ಪಿತವೆನ್ನುತ್ತೇನೆ" ಎಂದು ಭಿಕ್ಷೆ ಬೇಡಿದ.

ಕರಿಕಾಲಮ್ಮೆಗೆ ಜಿಪುಣ ಶೆಟ್ಟಿಯಾದ ಪತಿಯು ಭಯ, ಆದರೆ ಬಂದ ಶಿವಭಕ್ತನನ್ನು ಉಪವಾಸ ಕಳಿಸಲು ಇಷ್ಟವಿಲ್ಲದೆ ಎರಡು ಹಣ್ಣುಗಳಲ್ಲಿ ಒಂದನ್ನು ತಂದಿತ್ತು "ಅಯ್ಯ! ಎನ್ನ ಪತಿ ಕಂಡರೆ ಕಡು ಕೋಪಿಸುವ, ಇದನ್ನು ಮರೆಯಲ್ಲಿ ತೆಗೆದುಕೊಂಡುಹೋಗಿ ದೂರ ಎಲ್ಲಾದರು ಗುಡಿಯಲ್ಲಿ ಕುಳಿತು ತಿನ್ನಿ...." ಎಂದಳು. ಕಪಟ ಜಂಗಮ ತಲೆಯಾಡಿಸಿ ಹೊರಟ. ಆದರೆ ಮಾಣಿಕ್ಯಶೆಟ್ಟಿ ಮನೆಗೆ ಬರುವ ಹಾದಿಯಲ್ಲಿ ಅವನೆದುರೆ ಫಲ ಹಿಡಿದು ಅದರ ಕಂಪು ಮೂಸುತ್ತ ಹೆಜ್ಜೆ ಹಾಕಿದ, ತನ್ನ ಮನೆಯಿಂದ ಹೊರಬಂದ ಜಂಗಮ—ಅವನ ಹಸ್ತದಲ್ಲಿ ಮಾರು ದೂರಕ್ಕು ಕಂಪು ಸೂಸುವ ರಸಭರಿತ ಮಾವನ್ನು ಕಂಡು ಭವಿಯಾದ ಮಾಣಿಕ್ಯಶೆಟ್ಟಿಗೆ ಕೋಪ ಉಕ್ಕಿ ಬಂತು.

ಮನೆಗೆ ಬಂದವನೆ...."ಸತಿ ಫಲಗಳನ್ನು ತಾ...." ಎಂದು ಕೋಪದಿಂದ ಕೂಗಿದ, ಅಮ್ಮ ಹೆದರುತ್ತಾ ಒಂದು ಫಲವನ್ನು ತಂದಿತ್ತಳು. ಶೆಟ್ಟಿ ಕೋಪದಿಂದ "ಇನ್ನೊಂದೆಲ್ಲಿ—ಈ ಕ್ಷಣದಲ್ಲಿ ತಾ—ಇಲ್ಲದಿದ್ದರೆ ಕೊಂದುಬಿಡುವೆನು" ಎಂದು ಗರ್ಜಿಸಿದ.

ಅಮ್ಮ ದೇವರ ಮನೆಗೆ ಹೋಗಿ ಕತ್ತಿಯನ್ನು ಕೊರಳಿಗೆತ್ತಿ "ಶಿವ ನಿನ್ನ ಪಾದಕ್ಕೆ ಸೇರಿಸಿಕೊ... ಪತಿಯು ಕೈಯಿಂದ ದುರ್ಮರಣ ಪಡೆದು ಪತಿಗೆ ಸ್ತ್ರೀಹತ್ಯೆ ಪಾಪ ಕಟ್ಟಲಾರೆ" ಎಂದು ಬೇಡಿ ತಾನೆ ಕೊರಳಿಗಿರಿದುಕೊಳ್ಳಲೆತ್ನಿಸಿದಳು. ದೊಪ್ಪೆಂದು ಬಿತ್ತು ಹಣ್ಣು, ಅಮ್ಮ ಆನಂದಭರಿತಳಾದಳು. ಆ ಹಣ್ಣನ್ನೆತ್ತಿ ತಂದು ಪತಿಗಿತ್ತಳು, ಶೆಟ್ಟಿ ಹಣ್ಣನ್ನು ಸವಿಯುತ್ತಿದ್ದಂತೆ ಒಂದು ಕ್ಷಣ ಹಿಂದೆ ಕಂಡ ಜಂಗಮ ಪ್ರತ್ಯಕ್ಷವಾಗಿ ಬಂಗೈ ಆಡಿಸಿ ಹೋದಂತಾಯಿತು.

ಮಾಣಿಕ್ಯ ಶೆಟ್ಟಿ ದಿಗ್ಭ್ರಾಂತನಾದ, ನಡೆದುದ್ದೇನೆಂದು ಸತ್ಯವಾಗಿ ತಿಳಿಸಬೇಕೆಂದು ಸತಿಗೆ ಬೇಡಿದ. ಕರಿಕಾಲಮ್ಮ ನಿಜಸಂಗತಿ ತಿಳಿಸಿಬಿಟ್ಟಳು, ಶಿವಮಾಯೆ ಎಂದು ದಂಪತಿಗಳಿಬ್ಬರಿಗು ತಿಳಿಯಿತು.

ಆಗ ಮಾಣಿಕ್ಯ ಶೆಟ್ಟಿ ಅವರಿಗೆ ಕೈಮುಗಿದು—"ತಾಯಿ ಇಂದಿನಿಂದ ನೀವು ಸ್ವತಂತ್ರರು. ಹೇಗೆ ಬೇಕಾದರು ಇರಬಹುದು" ಎಂದು ನುಡಿದ. ತನಗೆ ಸಂಸಾರ ಸಾಕಾಗಿದೆಯೆಂದು ಅಮ್ಮ ಮನೆತೊರೆದು ನಡೆದಳು. ಕೆಲವರು ತಾಯಿಯೆಂದು

ಮಹಾ ಭಕ್ತಳೆಂದು ನಮಿಸುವರು, ಕೆಲವರು ಚೆಲುವೆಯಾದ ಒಂಟಿ ಹೆಣ್ಣೆಂದು ಕಾಮುಕ ದೃಷ್ಟಿಯಿಂದ ಹಿಂಬಾಲಿಸಿ ಮುಟ್ಟಲು ಬರುವರು.

ನರಜನ್ಮದ ಈ ಕಾಮುಕರ ಬಗ್ಗೆ ಅಮ್ಮ ಹೇಸಿಗೆಗೊಂಡಳು. ದೇಹ ಸೌಂದರ್ಯ ವಿದ್ದರೆ ತಾನೆ ಈ ಪಶುಗಳು ಹಿಂಬಾಲಿಸುವುದು ? ಎಂದು ಒಂದು ಕತ್ತಿಯನ್ನು ತಂದು ತನ್ನ ದೇಹದ ಚರ್ಮ ಮಾಂಸವನ್ನು ಕೆತ್ತಿ ಕೆತ್ತಿ ಬಿಸಾಟಳು ಈಗ ಅಮ್ಮ ಎಲುಬಿನ ಹಂದರ. ನಡೆದುಬರುತ್ತಿದ್ದರೆ ನೋಡಿದವರೆಲ್ಲಾ ಪ್ರೇತಾ ಎಂದು ಹೆದರಿ ಓಡಿಹೋಗುವರು. (ತಲೆ ಬಿಟ್ಟು ಮಿಕ್ಕದ್ದೆಲ್ಲಾ ಎಲುಬು) ಅಮ್ಮ ಹಿಮಾಲಯದತ್ತ ಬಂದಳು ಅದನ್ನು ಏರಿ ಕೈಲಾಸದತ್ತ ಬರಬೇಕೆಂದು ಯೋಚಿಸುತ್ತಿದ್ದಂತೆ ಶಿವನ ಪಾದದ ಗುರುತು....ಅಸಂಖ್ಯ ಶಿವಶರಣರ ಪಾದದ ಗುರುತು ಕಾಣಿಸಿತು. ಅಮ್ಮ ಭಕ್ತಿಯಿಂದ ಪುಳುಕಿತಳಾದಳು. ಅದರ ಮೇಲೆ ತಾನು ಕಾಲೂರಿ ನಡೆಯುವುದು ಉಚಿತವಲ್ಲವೆನಿಸಿತು.

ತಲೆಯೂರಿ ಹೆಜ್ಜೆ ಹಾಕುತ್ತಾ ಶಿವನಾಮದ ಬಲದಿಂದ ತನ್ನ ಭಕ್ತಿಯ ಬಲ ದಿಂದ ಕೈಲಾಸಕ್ಕೆ ಬರಲಾರಂಬಿಸಿದಳು.

ಶಿವನು ಕೈಲಾಸದಲ್ಲಿ ತನ್ನ ಒಡ್ಡೋಲಗದಲ್ಲಿ ಕುಳಿತಿದ್ದಾನೆ. ತಲೆಕೆಳಗಾಗಿ ಬರುತ್ತಿರುವ ಈ ಎಲುಬಿನ ಹಂದರ ನೋಡಿ ಪಾರ್ವತಿ ಭಯದಿಂದ ಶಿವನನ್ನು ಬಿಗಿ ದಪ್ಪಿ...."ಕಂತುಹರಾ....ಏನಿದು ಭಯಂಕರಾ....?" ಎಂದಳು. ಆಗ ಶಿವ ನಸು ನಗುತ್ತಾ.

"ಬೆದರದಿರು ಉಮೆ, ಬರುತಿರುವಾಕೆ ನಮ್ಮವ್ವ, ಬರುತಿರುವಾಕೆ ನಿನ್ನತ್ತೆ, ನನ್ನ ಹೆತ್ತವ್ವೆ, ಕರಿಕಾಲಮ್ಮ" ಎಂದು ಬಣ್ಣಿಸುತ್ತಾ ತಾನೆ ಸಿಂಹಾಸನದಿಂದ ಕೆಳಗಿಳಿದು ಹೋಗಿ ಕರಿಕಾಲಮ್ಮಯ ಕೈಹಿಡಿದುಕೊಂಡು ಮೇಲಕ್ಕೆ ಕರೆತಂದು ಸಿಂಹಾಸನದ ಮೇಲೆ ಕೂಡಿಸುತ್ತಾನೆ.

ಶಿವಗಣದೆದರು ಅವಳ ಭಕ್ತಿ ಸಾಹಸದ ಕಥೆಯನ್ನು ತಾನೆ ವಿವರಿಸಿ ಸಭೆಯಲ್ಲಿ ಅವಳನ್ನು ಕೊಂಡಾಡುತ್ತಾನೆ. ಕರಿಕಾಲಮ್ಮಗೆ ಗಣಪದವಿಯನ್ನಿತ್ತು ಅವಳ ಕೋರಿಕೆ ಯಂತೆ ಅವಳಿಗೆ ತನ್ನ ನಾಟ್ಯ ತೋರಿಸುತ್ತಾನೆ. ಅಮ್ಮ ಶಿವನಿಗೆ ತಾಯಿಯಾಗಿ ಶಾಶ್ವತವಾಗಿ ಕೈಲಾಸದಲ್ಲಿ ಇರುತ್ತಾಳೆ.

---

ಖಂಡನೆ

ಬೆಂಗಳೂರು ವಿಶ್ವವಿದ್ಯಾಲಯದ ಜ್ಞಾನಭಾರತಿ ಆವರಣದಲ್ಲಿ ಇತ್ತೀಚೆಗೆ ಕನ್ನಡ ಅಧ್ಯಯನ ಕೇಂದ್ರದ ನಿರ್ದೇಶಕರೂ, ಸುಪ್ರಸಿದ್ಧ ಕವಿಗಳೂ, ವಿಮರ್ಶಕರು, ಶ್ರೇಷ್ಠ ಪ್ರಾಧ್ಯಾಪಕರೂ ಆದ ಡಾ|| ಜಿ. ಎಸ್. ಶಿವರುದ್ರಪ್ಪನವರು ಮತ್ತು ಇತರ ಪ್ರಾಧ್ಯಾಪ ಕರ ಮೇಲೆ ನಡೆದ ಹಲ್ಲೆಯನ್ನು "ಸಿದ್ಧಗಂಗಾ" ತೀವ್ರವಾಗಿ ಖಂಡಿಸುತ್ತದೆ.

* * *

# ವಿಚಿತ್ರ ವಿಶ್ವ

—ಪಂ. ರಾಮಕೃಷ್ಣ ಶಾಸ್ತ್ರಿ

ವಶಕ್ತಿ ನಿಲಯ, P.O. ಮಚ್ಚಿನ 574295, VIA ಮಡಂತ್ಯಾರ್, (ದ.ಕ.)

## ಪೆನ್ಸಿಲಿನ ಹಿರಿಮೆ

ಇಂದು ಬರವಣಿಗೆಯ ಸಾಧನಗಳಲ್ಲಿ ಪೆನ್ಸಿಲು ಹೆಚ್ಚು ಜನಪ್ರಿಯವಾಗಿದೆ. ನೊಬಲ್ ಪ್ರಶಸ್ತಿ ಪಡೆದ ಅರ್ನೆಸ್ಟ್ ಹೆಮಿಂಗ್ವೆಯ ಎಲ್ಲಾ ಕೃತಿಗಳೂ ಪೆನ್ಸಿಲಿನಿಂದ ಬರೆಯಲ್ಪಟ್ಟವೆ. ದಿ ಬೇಂದ್ರೆಯವರ 'ಮೇಘದೂತ' ಪೂರ್ಣ ಪೆನ್ಸಿಲಿನಿಂದ ಬರೆಯಲ್ಪಟ್ಟಿತ್ತು. ಬ್ರಿಟನ್ನಿನ ಪೆನ್ಸಿಲ್ ತಯಾರಿಕಾ ಸಂಸ್ಥೆಯೊಂದರ ಮುಖ್ಯಸ್ಥ ರೋಹಾನರು ೭ ಅಂಗುಲ ಉದ್ದದ ಒಂದು ಪೆನ್ಸಿಲಿನಿಂದ ೩೫ ಮೈಲುದ್ದದ ಗೆರೆ ಎಳೆಯಬಹುದು ಅಥವಾ ೨೫ ಲಕ್ಷ ಶಬ್ದಗಳನ್ನು ಬರೆಯಬಹುದೆನ್ನುತ್ತಾರೆ

ಅಂಚೆ ಚೀಟಿ ಸಂಗ್ರಹದಂತೆ ಪೆನ್ಸಿಲು ಸಂಗ್ರಹದ ಹವ್ಯಾಸವಿರುವ ಅಮೇರಿಕದ ಒಬ್ಬಾತ ೧೮ ಸಾವಿರಕ್ಕಿಂತ ಹೆಚ್ಚು ಬಗೆಯ ಪೆನ್ಸಿಲುಗಳನ್ನು ಸಂಗ್ರಹಿಸಿದ್ದಾನೆ. ಪೆನ್ಸಿಲ್ ತಯಾರಿಕೆಗೆ ಬೇಕಾದ ಗ್ರಾಫೈಟ್ ೧೫೫೦ ರಲ್ಲಿ ಶೋಧವಾಯಿತು. ೧೭೯೫ ರಲ್ಲಿ ಕೌಂಟೆ ಎಂಬ ಫ್ರೆಂಚ್ ವ್ಯಕ್ತಿ ಆಧುನಿಕ ಪೆನ್ಸಿಲುಗಳನ್ನು ತಯಾರಿಸಿದ. ಒಂದು ಪೆನ್ಸಿಲು ತಯಾರಿಸಲು ೩ ತಿಂಗಳು ಬೇಕು. ಅಷ್ಟಾಕೃತಿ, ತ್ರಿಕೋನಾಕೃತಿಯ ಪೆನ್ಸಿಲುಗಳೂ ಇವೆ. ಪೆನ್ಸಿಲುಗಳ ಮೇಲೆ ಜಾಹಿರಾತುಗಳನ್ನು ಮುದ್ರಿಸುವ ಬಗೆ ಬ್ರಿಟನ್ನಿನಲ್ಲಿ ಆರಂಭವಾಗಿದೆ.

## ಬಿಗ್ ಬೆನ್

ಇಂಗ್ಲೆಂಡಿನ ವೆಸ್ಟ್ ಮಿನಿಸ್ಟರಿನ ಪಾರ್ಲಿಮೆಂಟ್ ಭವನದ ಗೋಪುರದಲ್ಲಿ ಇರುವ 'ದಿ ಗ್ರೇಟ್ ಕ್ಲಾಕ್ ಆಫ್ ದಿ ಪೇಲೇಸ್ ಆಫ್ ವೆಸ್ಟ್ ಮಿನಿಸ್ಟರ್' ಎಂಬ ಹೆಸರಿನ ಗಡಿಯಾರವನ್ನು ಬಿಗ್‌ಬೆನ್ ಎಂದು ಸಂಕ್ಷಿಪ್ತವಾಗಿ ಕರೆಯುತ್ತಾರೆ. ಇದರಲ್ಲಿ ೨೩ ಅಡಿ ವ್ಯಾಸದ ೪ ಮುಖಫಲಕಗಳಿವೆ. ಅದರ ತಾಮ್ರದ ನಿಮಿಷದ ಮುಳ್ಳು ವರುಷದಲ್ಲಿ ಚಲಿಸುವ ದೂರ ೧೦೦ ಮೈಲು. ೧೮೫೯ ರಿಂದ ಚಲಿಸಲಾರಂಭಿಸಿದ ಈ ಗಡಿಯಾರ ಇದುವರೆಗೆ ೩ ಸಲ ಪಾರ್ಲಿಮೆಂಟ್ ಕಟ್ಟಡದ ರಿಪೇರಿ ನಡೆದಾಗ, ಜರ್ಮನಿಯು ಲಂಡನ್ನಿನ ಮೇಲೆ ಮಹಾಯುದ್ಧದ ಕಾಲದ ಬಾಂಬಿನ ಮಳೆಗರೆದಾಗ, ಒಮ್ಮೆ ವಿಪರೀತ ಚಳಿಯಿಂದಾಗಿ ನಿಂತಿತ್ತು. ಒಂದು ಸಲ ನಿಮಿಷದ ಮುಳ್ಳಿನ ಮೇಲೆ ಗುಬ್ಬಚ್ಚಿಯೊಂದು ಬಂದು ಕುಳಿತುದುದರಿಂದ ೪ ನಿಮಿಷ ಹಿಂದೆ ಬಿದ್ದಿತ್ತು.

ಏಳೂವರೆ ಅಡಿ ಎತ್ತರ, ಒಂಬತ್ತು ಅಡಿ ವ್ಯಾಸವಿರುವ ಈ ಗಡಿಯಾರ ಹದಿಮೂರೂವರೆ ಟನ್ ಭಾರವಿದೆ. ೧೮೫೯ ಜುಲೈ ೧೧ ರಂದು ಇದು ಕಾರ್ಯಾರಂಭ ಮಾಡಿತು. ಇದಕ್ಕೆ ಒಂಬತ್ತು ಗಂಟೆ ಬಾರಿಸಲು ೬೦ ಸೆಕೆಂಡ್ ಬೇಕು. ೧೯೨೩ ರಿಂದ ೧೯೬೦ ರ ವರೆಗೆ ಬಿಬಿಸಿಯು ವಾರ್ತಾ ಪ್ರಸಾರ ಮಾಡುವ ಮೊದಲು ಈ ಹೊತ್ತನ್ನು ಪ್ರಸಾರ ಮಾಡುತ್ತಿತ್ತು. ೧೯೬೦ ರಿಂದ ವಾರ್ತಾ ಪ್ರಸಾರದ ವೇಳೆ ರಾತ್ರಿ ೧೦ ಗಂಟೆಗೆ ಬದಲಾಯಿಸಲ್ಪಟ್ಟ ಕಾರಣ ಈ ವೇಳೆ ಪ್ರಸಾರವನ್ನು ನಿಲ್ಲಿಸಿತು.

## ಅಕ್ಕಿಕಾಳಿನ ಬೆಲೆ

ಒಂದು ಅಕ್ಕಿಕಾಳಿನ ಬೆಲೆ ಒಂದು ಲಕ್ಷ, ಅರವತ್ತು ಸಾವಿರ ರೂಪಾಯಿಗಳೆಂದರೆ ಯಾರು ತಾನೇ ನಂಬಬಹುದು? ಹಾಂಗ್‌ಕಾಂಗಿನ ಪ್ರವಾಸಿ ಸಂಸ್ಥೆಯೊಂದರಲ್ಲಿರುವ ಈ ಅಕ್ಕಿಕಾಳಿನಲ್ಲಿ ಚೀನೀ ಕಲಾವಿದರ ಕುಸುರಿ ಕೆಲಸವಿದೆ. ಇಂಗ್ಲೆಂಡಿನ ಸಾಮ್ರಾಜ್ಞಿ ಎಲಿಜಬೆಥ್ ಅಲ್ಲಿಗೆ ಭೇಟಿ ಕೊಟ್ಟಾಗ ಪತಿ ಎಡಿನ್‌ಬರೋದ ಡ್ಯೂಕ್‌ನೊಂದಿಗೆ ಅವಳಿರುವ ದೃಶ್ಯವನ್ನು ಈ ಅಕ್ಕಿಕಾಳಿನಲ್ಲಿ ನೈಪುಣ್ಯದಿಂದ ಕೆತ್ತಲಾಯಿತು. ಸೂಕ್ಷ್ಮದರ್ಶಕದಿಂದ ವೀಕ್ಷಿಸಿದಾಗ ಆ ರೇಖಾ ವಿನ್ಯಾಸವನ್ನು ಅದರಲ್ಲಿ ಗುರುತಿಸಬಹುದಷ್ಟೆ. ಅದಕ್ಕಾಗಿ ಅಷ್ಟೊಂದು ಬೆಲೆ!

## ಪ್ರಾಣಿ ವೈಚಿತ್ರ್ಯ

ಸೋಯಿಂಗ್ ಬರ್ಡ್ ಎಂಬ ಅಸಾಧಾರಣ ಪಕ್ಷಿ ವೆಸ್ಟ್ ಇಂಡೀಸ್‌ನಲ್ಲಿದೆ. ಅದು ಕಡ್ಡಿಗಳ ಸೂಜಿಗೆ ಗಿಡಗಳ ನಾರನ್ನು ದಾರದಂತೆ ಉಪಯೋಗಿಸಿ, ಎಲೆಗಳನ್ನು ಹೊಲಿದು ಗೂಡುಗಳನ್ನು ನಿರ್ಮಿಸಿಕೊಳ್ಳುವುದೊಂದು ಸೋಜಿಗ.

ಜ್ಞಾಪಕಶಕ್ತಿಯಲ್ಲಿ ಕಪ್ಪೆಯ ಹೆಸರು ಅದ್ವಿತೀಯವಾಗಿದೆ. ಅದು ತಾನು ಹಿಂದಿನ ಸಾರೆ ಮೊಟ್ಟೆಯಿರಿಸಿದ ಸ್ಥಳವನ್ನು ಮರೆಯಲಾರದು. ಆ ಸ್ಥಳದ ಸುತ್ತು ಯಾವ ಬದಲಾವಣೆಗಳಾಗಿದ್ದರೂ, ಆ ಜಾಗವೇ ಮಾಯವಾಗಿ ಹೋಗಿದ್ದರೂ ಕಪ್ಪೆ ಗುರುತಿಸುತ್ತದೆ. ನಕ್ಷತ್ರಗಳ ಬೆಳಕಿನಲ್ಲಿ ಕೂಡ ದಾರಿಯನ್ನು ಸ್ಪಷ್ಟವಾಗಿ ಕಾಣಬಲ್ಲ ಶಕ್ತಿಯಿರುವುದು ಕಪ್ಪೆಗೆ ಮಾತ್ರ.

ಅತ್ಯಂತ ಚಾಣಾಕ್ಷ ಮೀನು ನೈಲ್ ನದಿಯಲ್ಲಿರುವ ಮೋರ್ಮಿರಸ್. ಅದಕ್ಕೆ ನಿಸರ್ಗವು ಮೋರ್ಮಿರಸ್ ಗೆರಾಡಾರ್ ಒದಗಿಸಿದ ಕಾರಣ ಇದುವರೆಗೆ ಆ ಜಾತಿಯ ಒಂದೇ ಒಂದು ಮೀನು ಕೂಡ ಯಾರ ಬಲೆಗೂ ಬೀಳದೆ ತಪ್ಪಿಸಿಕೊಳ್ಳಲು ಸಾಧ್ಯವಾಗಿದೆ.

(40 ನೇ ಪುಟ ನೋಡಿ)

# ಗ್ರಾಮಾಂತರ ಬಸವ ಜಯಂತಿ

—ಹೆಚ್. ವಿ. ವೀರಭದ್ರಯ್ಯ

29-3-1985 ಬಸವ ಜಯಂತಿ ಕಾರ್ಯಕ್ರಮಕ್ಕೆ ತನ್ನನ್ನು ಅರ್ಪಿಸಿಕೊಂಡಿತು ಡಿ. ರಾಮಪುರ. ಪುಟ್ಟಗ್ರಾಮ. ಆದರೆ ಭಕ್ತಿ ಶ್ರದ್ಧೆಗಳಲ್ಲಿ ಪುಟ್ಟದಲ್ಲ. ಗ್ರಾಮದ ಜನಪದ ದೇವತೆಗಳ ಉತ್ಸವದೊಂದಿಗೆ ಪರಮ ಪೂಜ್ಯರಿಗೆ ಸ್ವಾಗತ ನೀಡಿತು. ತೆಂಗುತಲೆದೂಗಿದರೆ, ಆಲ ನೆರಳು ನೀಡಿತು. ಬೇವು ಗಾಳಿ ಬೀಸಿತು, ಅರಳಿಕಟ್ಟೆ ಸಮಾರಂಭದ ವೇದಿಕೆಯಾಯಿತು.

ಕಾಲಕ್ಕೆ ಸರಿಯಾಗಿ ಕಾರ್ಯಕ್ರಮಗಳು ಪ್ರಾರಂಭವಾದವು, "ಸಿದ್ಧಗಂಗಾ ಕ್ಷೇತ್ರ ನಮ್ಮ ನಿಮ್ಮೆಲ್ಲರ ಭಾಗ್ಯದ ಸಂಕೇತ. ಪುಟ್ಟ ಗ್ರಾಮದಲ್ಲಿ ಪುಣ್ಯ ಕಾರ್ಯ, ಬಸವ ಜಯಂತಿ ಆಚರಣೆಯ ಸಂಕಲ್ಪ ಪುಣ್ಯೋದಯದ ಪ್ರಾರಂಭ. ದಿಕ್ಕೆಟ್ಟ ದಿನಗಳಲ್ಲಿ ಚುಕ್ಕಾಣಿ ಹಿಡಿದು ಹೊರಟಿದ್ದಾರೆ ಪರಮ ಪೂಜ್ಯ ಶ್ರೀ ಶ್ರೀಗಳವರು. ಬಸವತತ್ವ ಇಂದು ಬದುಕಿನ ಉಸಿರಾಗಬೇಕು, ನಂಬು ಗುರುವಿಹನು ಎಂದು ನಂಬುಗುರಿ ಯಿಹುದು ಎಂದು ಎಂಬ ನಿರ್ಧಾರ ಇಂದು ಅಗತ್ಯ. ಬದುಕು ಮುಗ್ಗುರಿಸಿದಾಗ ಎತ್ತುವ ಮಂತ್ರ ಬಸವತತ್ವ. ಬಸವಣ್ಣ ಲೋಕ ಗುರು, ಸಕಲ ಜೀವರಿಗೆ ಲೇಸನೆ ಬಯಸಿದ ವಿಶಾಲ ಹೃದಯ. ಭಕ್ತರೆಲ್ಲ ಒಂದೆ; ಅವರೊಳಗೆ ಭೇದ ಸಲ್ಲ. ''ದೇವ ಸಹಿತ ಭಕ್ತ ಮನೆಗೆ ಬಂದರೆ ಕಾಯಕವಾವುದೆಂದು ಬೆಸಗೊಂಡರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ'–ಎಂದು ಪ್ರತಿಜ್ಞಾ ಸಂಕಲ್ಪ ಮಾಡಿದ ಲೋಕ ಪಾವನಮೂರ್ತಿ ಬಸ ವಣ್ಣ ಎಂದು ಉಪನ್ಯಾಸ ಮಾಡಿದರು ಸಿದ್ಧಗಂಗಾ ಸಂಜೆ ಕಾಲೇಜಿನ ಪ್ರಾಚಾರ್ಯರಾದ ಶ್ರೀ ಬಿ. ವೀರಭದ್ರಯ್ಯನವರು.

ಶ್ರೀ ಎಸ್. ಎಂ. ಭಾಸ್ಕರಾಚಾರ್, ಕನ್ನಡ ಉಪನ್ಯಾಸಕರು, ವಿದ್ಯಾವಾಹಿನಿ ಕಿರಿಯ ಕಾಲೇಜು, ತುಮಕೂರು. ಶ್ರೀಯವರು ಉಪನ್ಯಾಸ ಮಾಡುತ್ತ ''ಜೀವನ ಇಂದು ಮಾನಸಿಕ ಶಾಂತಿಯಿಲ್ಲದೆ ತಳಮಳಿಸುತ್ತಿದೆ. ಮಾನವೀಯ ಮೌಲ್ಯಗಳೆಲ್ಲ ಮಣ್ಣುಗೂಡುತ್ತಿವೆ, ಶೋಷಣೆಯ ವಿರಾಟ್ ನರ್ತನವೇ ನಡೆದಿದೆ, ಘೋಷಣೆಗಳ ಅಬ್ಬರ ಬೊಬ್ಬೆ ಇಡುತ್ತಿದೆ. ದುರ್ಭರತೆ ಜೀವನವನ್ನು ಕಬಂಧ ಬಾಹುವಿನಂತೆ ಬಂಧಿಸಿದೆ. ಜೀವಂತ ಶವಗಳಾಗಿ ಜನ ಬಾಳುತ್ತಿದ್ದಾರೆ, ಎತ್ತ ನೋಡಿದರೂ ಒಂದಾದರೂ ಬೆಳಕಿನ ಕಂದೀಲು ಕಾಣುತ್ತಿಲ್ಲ. ನಾಡಿನ ಮಹಾ ಭಾಗ್ಯವೆಂಬಂತೆ ಸಿದ್ಧಗಂಗಾ ಶ್ರೀಗಳಿಗೆ ಅದ್ಭುತವಾದ ಮಹಾ ಸೇವಾ ಮಣಿಹದಲ್ಲಿ ಮುನ್ನಡೆದಿದ್ದಾರೆ.

ಬಸವ ಜ್ಯೋತಿಯ ಪುಣ್ಯ ಬೆಳಕನ್ನು ಹಳ್ಳಿಯಿಂದ ಹಳ್ಳಿಗೆ ಕೊಂಡೊಯ್ಯುತ್ತಿದ್ದಾರೆ. ಅಡ್ಡಪಲ್ಲಕ್ಕಿ ಉತ್ಸವ ಬೇಡುತ್ತಿಲ್ಲ ಶ್ರೀಗಳು, ಲಕ್ಷದೀಪೋತ್ಸವ ಮಾಡಿರೆನ್ನುತ್ತಿಲ್ಲ, ನಡೆಮುಡಿ ಹಾಸಿ ಕರೆದೊಯ್ಯಿರಿ ಎನ್ನುತ್ತಿಲ್ಲ, ಕಾಣಿಕೆ ಇಷ್ಟೇ ಕೊಡಬೇಕು ಎಂಬ ವಿಧಿಯಿಲ್ಲ, ತಾವೇ ಖರ್ಚು-ವೆಚ್ಚಗಳನ್ನು ಭರಿಸುತ್ತ ಬಸವ ತತ್ವ ಪ್ರಚಾರ ಕೈಗೊಂಡಿದ್ದಾರೆ. ಕರ್ನಾಟಕದಲ್ಲಿ ಇಂಥ ಇನ್ನೊಬ್ಬ ಸ್ವಾಮಿಗಳು ಎಲ್ಲಿದ್ದಾರೆ? ಶ್ರೀ ಶ್ರೀಗಳವರು ಹೇಳುತ್ತಿರುವುದಾದರೂ ಏನು, ಬಸವಣ್ಣ ಹೇಳಿದ ಕಾಯಕ ತತ್ವವನ್ನು ಆಚರಿಸಿ, ದಾಸೋಹವನ್ನು ಆದಷ್ಟು ಮನತುಂಬಿ ಮಾಡಿ, ಬಾಳು ಬಂಗಾರವಾಗುತ್ತದೆ, ರಾಷ್ಟ್ರ ಸಮೃದ್ಧವಾಗುತ್ತದೆ ಎಂದು ಅಂದು 12ನೆಯ ಶತಮಾನದಲ್ಲಿ ಜನತೆಯ ಬದುಕು ಭಾರವಾಗಿದ್ದಾಗ ಬೆಳುದಿಂಗಳಾಗಿ, ತಂಗಾಳಿಯಾಗಿ ಬಸವಣ್ಣ ಬಂದರು. ಇಂದು ಶ್ರೀ ಶ್ರೀಗಳು ಬಂದಿದ್ದಾರೆ, ಹೂವು ಅರಳಬೇಕಾದರೆ ಬೇರು ಶುದ್ಧವಾಗಿರಬೇಕು, ಅಂತೆಯೇ ಇಂದು ಬಸವ ತತ್ವಗಳು ಬೇಕು. "ಕಾಮ ಕ್ರೋಧದ ಗುಡ್ಡ ಅನಂತಕಿದು ಅಡ್ಡ, ಅಲ್ಪರಾಗುವ ಕನಸು ಭಾರತೀಯರದಲ್ಲ; ಅನಂತವಾಗುವ ಆಶೆ ಅವರದು. ಅನಂತದೆತ್ತರ ಬಿತ್ತರಗಳಾಚೆ ನಿಂತು ಬಸವಣ್ಣ ನಮ್ಮನ್ನಿಂದು ನೋಡುತ್ತಿದ್ದಾನೆ. ತಾನು ಬಿತ್ತಿದ ಸಂದೇಶ ಏನಾಯಿತೆಂದು ನೋಡುತ್ತಲೇ ಇದ್ದಾನೆ. ಅವನ ಸಂತತಿ ನಾವು, ಅವನಿಗೆ ತಕ್ಕ ಹಾಗೆ ಬದುಕಬೇಕೆಂದು ಇಷ್ಟೆಲ್ಲ ಶ್ರಮವಹಿಸುತ್ತಿದ್ದಾರೆ ಪೂಜ್ಯ ಶ್ರೀ ಶ್ರೀಗಳವರೆಂದು" ನುಡಿದರು.

ಜನಪದ ಸಮಷ್ಟಿ ಸಂಸ್ಕೃತಿಯ ಮಹಾ ನೇತಾರ ಬಸವಣ್ಣ. ಬಿಜ್ಜಳ ರಾಜನ ಮಹಾ ಮಂತ್ರಿಯಾಗಿದ್ದುಕೊಂಡು, ರಾಜ್ಯದ ಅಂತ್ಯಜನ ಜೀವನವನ್ನೇ ಮಸ್ತಕದ ಮಣಿಯನ್ನಾಗಿಟ್ಟುಕೊಂಡು ಗೌರವಿಸಿದ ಮಹಾ ಮಾನವತಾವಾದಿ. ಜಗತ್ತು ಕಂಡರಿಯದಂಥ 'ಅದ್ಭುತ ವಿಸ್ಮಯ' ಆ ಮಹಾನುಭಾವನ ವ್ಯಕ್ತಿತ್ವ. ಆಸ್ಥಾನ ಕವಿಗಳಿಗೆಷ್ಟು ಸಮಸ್ಯಾತ್ಮಕನೋ, ಬುದ್ಧಿಜೀವಿಗಳಿಗೆಷ್ಟು ಪ್ರಿಯಮೂರ್ತಿಯೋ, ಮುಗ್ಧ ಜೀವಿಗಳಿಗೆ, ಹಳ್ಳಿಗರಿಗೆ ಅಷ್ಟೆ, ಇಷ್ಟಮೂರ್ತಿ ಬಸವಣ್ಣ. ಗರತಿಯರ ಹಾಡುಗಳನ್ನು ಪರಿಭಾವಿಸಿದಂತೆಲ್ಲಾ ಬಸವಣ್ಣನ ವ್ಯಕ್ತಿತ್ವದ ಆಗಾಧತೆ-ಆತ್ಮೀಯವಾಗುತ್ತ ಹೋಗುತ್ತದೆ"- ಎಂದು ಮಾತನಾಡಿದರು ಹೆಚ್. ವಿ. ವೀರಭದ್ರಯ್ಯನವರು.

ಮಾನವ ಜನ್ಮ ಶ್ರೇಷ್ಠವಾದುದು. ಜೀವನ ನಿರಾಕರಣವಲ್ಲ. ಸ್ವೀಕರಣ. ತುಂಬು ಪ್ರೀತಿಯಿಂದ ಬದುಕನ್ನು ಗೌರವಿಸಬೇಕು. ಬದುಕಿಗೆ ಬೆಲೆ ತಂದುಕೊಟ್ಟ ಮಹಾಪುರುಷನನ್ನು ಸ್ಮರಿಸಬೇಕು. ಸಂಸಾರವೇನೂ ತಿರಸ್ಕಾರವಾದುದಲ್ಲ. ಮಿಗಿಲಾಗಿ ಪವಿತ್ರವಾದುದು. ಶಿವಯೋಗದೆತ್ತರಕ್ಕೆ ಏರುವಂಥದು. ಜೀವನದ ಮೂಲಭೂತ ಆವಶ್ಯಕತೆಗಳನ್ನು ತುಂಬಿಕೊಳ್ಳುವ ಮಾರ್ಗಕಂಡುಕೊಳ್ಳಬೇಕು. ಇಂಥದನ್ನು ಬಸವಣ್ಣ ತೋರಿಸಿಕೊಟ್ಟರು. ಅನೇಕ ಧರ್ಮದೀಪಕರು ಮಾಡದೆ ಇದ್ದ

ೀವನ ಕ್ಷೇತ್ರವನ್ನು ಆಯ್ದುಕೊಂಡು ಹೋರಾಟ ಮಾಡಿದರು ಬಸವಣ್ಣ. ಒಂದು ಡೆ ರಾಜ್ಯ ನಿರ್ವಹಣೆ–ಮತ್ತೊಂದು ಕಡೆ ಧಾರ್ಮಿಕ ಸುಧಾರಣೆ. ಬದುಕಿನ ರ್ವತೋಮುಖ ದಾರಿದ್ರ್ಯ ಪರಿಹಾರಕ್ಕೆ ಆ ಮಹಾನುಭಾವ ನೀಡಿದ ಮಹಾಸೂತ್ರ ಡಿಮೆ, ಕಾಯಕತತ್ವ. ಕೈಲಾಸವೆಂಬುದು ಪ್ರತ್ಯೇಕ ಲೋಕವಲ್ಲ 'ಕಾಯಕವೇ ಲಾಸ'–ಎಂದು ಆಚರಿಸಿ ಸಾದರಗೊಳಿಸಿದ ಯಶಸ್ಸು ಬಸವಣ್ಣನವರದ್ದು. ಆದರೆ ಂದು ದುಡಿಮೆ ಇಲ್ಲ, ಸೋಗಲಾಡಿ ಜೀವನ ಹೆಚ್ಚು, ಕ್ರಿಯಾಭ್ರಷ್ಠತೆ ಆಧುನಿಕ ಗರಿಕತೆಯಾಗಿದೆ. ಬಸವಣ್ಣನವರು ರೂಪಿಸಿದ ಕ್ರಿಯಾಶೀಲ ಸಮಾಜ ಮತ್ತೆ ರುದ್ಧ ಬರಬೇಕಾಗಿದೆ. ಬಸವ ಜಯಂತಿಯ ಆಚರಣೆ ಅದಕ್ಕಾಗಿ ನಡೆದಿದೆ. ಸ್ಥೆಯ ಹತ್ತು ಜನ ಅರಿತು ಬಾಳಿದರೆ ಸಾಕು ಈ ಜಯಂತಿಯ ಆಚರಣೆ ಸಾರ್ಥಕ ಾಸುತ್ತದೆ ಎಂಬುದಾಗಿ ಆಶೀರ್ವಚನ ನೀಡಿದರು ಪರಮ ಪೂಜ್ಯ ಶ್ರೀ ಶ್ರೀಗಳವರು.

ರಾತ್ರಿ 'ಜಗಜ್ಯೋತಿ ಬಸವೇಶ್ವರ' ನಾಟಕ ಪ್ರದರ್ಶಿತವಾಯಿತು. ಶ್ರೀ ತ್ರದ ಅಧ್ಯಾಪಕ–ವಿದ್ಯಾರ್ಥಿಗಳೇ ರೂಪಿಸಿಕೊಂಡ ಸಂಘ 'ಶ್ರೀ ಸಿದ್ಧಲಿಂಗೇಶ್ವರ ಾಟಕ ಮಂಡಳಿ' ಪರಮ ಪೂಜ್ಯ ಶ್ರೀ ಶ್ರೀಗಳವರೇ ನಾಟಕ ಮಂಡಳಿಯ ಶ್ರೀರಕ್ಷೆ. ರಾಮಪುರದ ಪುಣ್ಯ, ಎಂದೂ ಕಾಣದಷ್ಟು ಜನಸ್ತೋಮವನ್ನು ಕಂಡಿತು. ಮ ಪೂಜ್ಯ ಶ್ರೀ ಶ್ರೀ ಗೌರೀಶಂಕರ ಸ್ವಾಮಿಗಳವರು ಅಧ್ಯಕ್ಷತೆ ವಹಿಸಿ ನಾಟಕ ನ್ನು ನಡೆಸಿಕೊಟ್ಟು ಆಶೀರ್ವದಿಸಿದರು. ಬೆಳಗಿನ ಆರು ಘಂಟೆಗೆ ನಾಟಕ ಮುಗಿ ಗ–ತೋಟದ ಕಡೆಗೆ ಹೋಗುವ ನೆನಪು ಬಂದಿತ್ತು ಪ್ರೇಕ್ಷಕರಿಗೆ. ಮಂಚಣ್ಣ– ರಸರ ಜೋಡಿಯ ಬಗ್ಗೆ ಕಡಬದ ಒಬ್ಬಾತ ಹೇಳುತ್ತಿದ್ದ–"ಅವರ ಹುಟ್ಟೇ ಅಂಥ ಬೇಕು" "ಜೀವ ತುಂಬಿ ಪಾತ್ರ ಮಾಡುತ್ತಾರೆ"–ಎಲ್ಲಿ ಹುಡುಕಿದರು ಸ್ವಾಮಿಗಳು ರನ್ನು ಎಂಬುದಾಗಿ. "ಬಿಜ್ಜಳ ರಾಜನ ಗಾಂಭೀರ್ಯ ತುಂಬಾ ಮಧುರವಾಗಿತ್ತು" ದ ಇನ್ನೊಬ್ಬ. "ಅಂತೂ ಸ್ವಾಮಿಗಳ ಸೇವೆಗೆ ಇತಿಮಿತಿ ಇಲ್ಲವೆಂದೇ ಕಾಣುತ್ತೆ" ನ್ನುತ್ತಿದ್ದ ವೃದ್ಧನೊಬ್ಬ. ಕಾರಿನ ಹಾರನ್ ಕೇಳಿಸಿಕೊಂಡ ವರದಿಗಾರ ಅತ್ತ ಇಟ್ಟ.

---

## ಅಭಿನಂದನೆ

ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನ ವಿದ್ಯಾರ್ಥಿನಿಯಾದ ಕುಮಾರಿ ಶೋಭಾ ". ಆರ್. ರವರು ಬೆಂಗಳೂರು ವಿಶ್ವ ವಿದ್ಯಾಲಯ 1984–85 ರಲ್ಲಿ ನಡೆಸಿದ ಮ ಬಿ ಎ. ಪದವಿಯಲ್ಲಿ ಆರನೆ ರ್‍ಯಾಂಕ್ ಗಳಿಸಿ ಕಾಲೇಜಿಗೆ ಕೀರ್ತಿ ತಂದ ಶುಭ ರ್ಭದಲ್ಲಿ 'ಸಿದ್ಧಗಂಗಾ' ತುಂಬು ಹೃದಯದ ಅಭಿನಂದನೆಗಳನ್ನು ಸಲ್ಲಿಸಲು ೋಷಿಸುತ್ತದೆ. ವಿಜೇತ ವಿದ್ಯಾರ್ಥಿಯ ಯಶಸ್ಸಿಗಾಗಿ ಶ್ರಮಿಸಿದ ಪ್ರಾಚಾರ್ಯರ ಅಧ್ಯಾಪಕ ವೃಂದದವರಿಗೆ, ಮತ್ತಿತರ ಸಿಬ್ಬಂದಿ ವರ್ಗದವರಿಗೆ ಮೆಚ್ಚುಗೆಯನ್ನು ಪಡಿಸುತ್ತದೆ 'ಸಿದ್ಧಗಂಗಾ'.

(36 ನೇ ಪುಟದಿಂದ)

## ಟೂತ್‌ಬ್ರಷ್ಷಿನಲ್ಲೇ ಟೂತ್‌ಪೇಸ್ಟು

ಲಂಕಾಷೈರ್‌ನ ನ್ಯಾಷನಲ್ ಎಂಜಿನಿಯರಿಂಗ್ ಲೆಬೊರೆಟರಿಯ ಡಾ|| ಕೆನೆ
ರೈಟ್ ಹೊಸ ಬಗೆಯ ಟೂತ್ ಬ್ರಷ್ಷನ್ನು ತಯಾರಿಸಿದ್ದಾರೆ. ಇದು ಒಂದು ಬ್ರಷ
ಎರಡು ತಿಂಗಳ ಅವಧಿಗೆ ಹಲ್ಲುಜ್ಜಲು ಬರುತ್ತದೆ ಮಾತ್ರವಲ್ಲ ಪೇಸ್ಟು ಕೂಡ ಅ
ರೊಳಗಿನಿಂದಲೇ ಹೊರಗೆ ಬರುವುದು.

ಕಾಬೂಲ್ ನಗರದ ರೈತರು ಯಾರು ಹೆಚ್ಚು ಬಾಯಾಕಳಿಸಲು ಸಮರ್ಥರ
ಎಂಬ ಬಗೆಗೆ ಇತ್ತೀಚೆಗೆ ಸ್ಪರ್ಧೆ ನಡೆಸಿದರು. ಗೆದ್ದವರಿಗೆ ದೊಡ್ಡ ಮೊತ್ತದ ಬಹು
ಮಾನವಿತ್ತು. ಒಬ್ಬ ರೈತ ಇದರಲ್ಲಿ ಭಾಗವಹಿಸಿ, ತನ್ನ ಹಲ್ಲಿನ ಸೆಟ್ಟನ್ನು ನುಂಗಿಬಿಟ್ಟ
ಸೆಟ್ಟಿನ ಲೋಹದ ಹಿಡಿಕೆಗಳು ಅವನ ಗಂಟಲಿನ ಒಳಭಾಗದಲ್ಲಿ ಸಿಲುಕಿಕೊಂಡವು
ಅದನ್ನು ತೆಗೆಯಲು ವೈದ್ಯರು ಆರು ತಾಸುಗಳ ಕಾಲ ಹೆಣಗಾಡಿದ ಮೇಲೆ ಬಡಪಾಯಿ
ಬಚಾವಾದ.

ಟಿಬೆಟಿನ ಹೆಂಗಸರು ತಲೆಗೂದಲನ್ನು ೧೦೮ ಜಡೆಗಳಾಗಿ ವಿಂಗಡಿಸಿಕೊಳ
ತ್ತಾರೆ. ಅವರ ಧಾರ್ಮಿಕ ಗ್ರಂಥವಾದ ಕಂಜೂರ್‌ನಲ್ಲಿರುವ ೧೦೮ ಸಂಪುಟಗ
ಹೆಗ್ಗುರುತು ಅದು.

---

(10 ನೇ ಪುಟದಿಂ

ಮನೆಯೊಳಗೆ ಮನೆಯೊಡೆಯನಿದ್ದಾನೊ ಇಲ್ಲವೊ ?
ಹೊಸ್ತಿಲಲಿ ಹುಲುಹುಟ್ಟಿ ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲಾ.
ಮನದೊಳಗೆ ಮನದೊಡೆಯನಿದ್ದಾನೋ ಇಲ್ಲವೊ ?
ತನುವಿನಲಿ ಹುಸಿ ತುಂಬಿ ಮನದೊಳಗೆ ವಿಷಯತುಂಬಿ
ಮನದೊಳಗೆ ಮನದೊಡೆಯನಿಲ್ಲಾ ಕೂಡಲಸಂಗಮದೇವಾ.

ಆದ್ದರಿಂದ ಈ ತನುವಿರಲಿ, ಈ ಮನವದರೊಳಗಿರಲಿ. ಆದು ನರನನ್ನು
ನಾಗಿಸುವ ಸಾಧನವಾಗಲಿ, ಮರ್ತ್ಯಕ್ಕೆ ಮಹವ ತರುವ ಕಾಮಧೇನುವಾಗಲಿ. ಇ
ಸತ್ಸಂಕಲ್ಪದಿಂದ ನಾವು ಬದುಕಬೇಕು.

ಸಿದ್ಧಗಂ

LICENCED TO POSTWITHOUT PRE PAYMENT LICENCE NO. 3
SIDDAGANGA MONTHLY Reg No. KRN Q-9



ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಕ್ಷೇತ್ರ.